# ಶೂದ್ರಮುನಿ

ಸಿ. ಕೆ. ನಾಗರಾಜರಾವ್

ಮುದ್ರಕರು :
ಎಚ್. ಎಲ್. ಪ್ರಸಾದ್
ಟೌನ್ ಪ್ರೆಸ್, ಬೆಂಗಳೂರು ನಗರ.



ಪ್ರಕಾಶಕರು :
ಶರತ್ ಏಜನ್ಸೀಸ್
ಬೆಂಗಳೂರು ನಗರ.

ಬೆಲೆ : ಆರಾಣೆ.

# ಬಿನ್ನಹ

"ಶೂದ್ರಮುನಿ" ಎರಡು ದೃಶ್ಯಗಳ ಏಕಾಂಕ ನಾಟಕ. "ಶಂಭೂಕನೆಂಬ ಶೂದ್ರನು ತಪಸ್ಸನ್ನಾಚರಿಸಿದ. ತ್ರೇತಾಯುಗದಲ್ಲಿ ಶೂದ್ರನಿಗೆ ತಪಸ್ಸಿಗೆ ಅಧಿಕಾರವಿಲ್ಲವೆಂಬ ಹೇಳಿಕೆಗೆ ಅನುಸಾರವಾಗಿ ಶಂಭೂಕನ ತಪಸ್ಸು ಧರ್ಮವಿರುದ್ಧವೆಂದು, ದೇವರ್ಷಿ ನಾರದರು, ರಾಜ ಪುರೋಹಿತರು, ಮೊದಲಾದವರು ಸಲಹೆ ಮಾಡಿದ ಮೇಲೆ ಅಯೋಧ್ಯಾಪತಿ ಶ್ರೀರಾಮಚಂದ್ರನು ಶಂಭೂಕನ ಶಿರಸ್ಸನ್ನು ಕಡಿದುಹಾಕುತ್ತಾನೆ'' ಎಂಬ ಒಂದು ಸನ್ನಿವೇಶ ರಾಮಾಯಣದ ಉತ್ತರಕಾಂಡದಲ್ಲಿ ಚಿತ್ರಿತವಾಗಿದೆ.

ಈ ಉತ್ತರಕಾಂಡವು ವಾಲ್ಮೀಕಿ ವಿರಚಿತವಲ್ಲ. ಬೇರೆ ಯಾರಿಂದಲೋ ರಚಿಸಲಾಗಿದೆ ಎಂಬ ವಿಚಾರದಲ್ಲಿ ತರ್ಕ ವಿತರ್ಕಗಳು ಬಹಳವಾಗಿವೆ. ಅದರ ಇತ್ಯರ್ಥಕ್ಕೆ ನಾನು ಕೈ ಹಾಕಿಲ್ಲ. ಅಷ್ಟೇ ಅಲ್ಲ ಅದನ್ನು ಪಂಡಿತೋತ್ತಮರಿಗೆ ಬಿಟ್ಟಿದ್ದೇನೆ. "ಶೂದ್ರಮುನಿ'' ಯಲ್ಲಿ ಅದೇ ಸನ್ನಿವೇಶವನ್ನೇ ನನಗೆ ಸೂಕ್ತ ತೋರಿದಂತೆ ಮಾರ್ಪಡಿಸಿಕೊಂಡು ಚಿತ್ರಿಸಿದ್ದೇನೆ ನನ್ನ ಭಾವನೆಯಲ್ಲಿ ಈ ಮಾರ್ಪಾಡುಗಳು ತೀರ ಅವಶ್ಯಕವೆಂದು ಕಂಡುಬಂದಿವೆ.

ವೃತ್ತಿಗಳಿಗೆ ಅನುಸಾರವಾಗಿ ಮಾನವನಲ್ಲಿ ಚತುರ್ವರ್ಣಗಳ ರಚನೆಯಾಗಿದೆಯೆಂದು ನನ್ನ ಭಾವನೆ. ಅವರವರ ವೃತ್ತಿಯಲ್ಲಿಯೇ ಸತ್ಯ, ನ್ಯಾಯ, ಧರ್ಮಗಳನ್ನು ಪಾಲಿಸಿ ಮೋಕ್ಷಸಾಧಕರಾಗಬಹುದು. ಭಗವಧ್ಯಾನವನ್ನು ಮಾಡುವ ಅಧಿಕಾರ ಎಲ್ಲರಿಗೂ ಉಂಟು. ಆದರೆ ಎಲ್ಲರೂ ಒಂದೇ ರೀತಿಯನ್ನು ಅನುಸರಿಸಲು ಸಾಧ್ಯವಿಲ್ಲ. ಅಲ್ಲದೆ ದೈವಸಾನ್ನಿಧ್ಯವನ್ನು ಸಾಧಿಸುವುದೇ ತಪಸ್ಸಿನ ಮೂಲ ಉದ್ದೇಶ. ಮತ್ತೊಬ್ಬನಿಗಿಂತ ತಾನು ಹೆಚ್ಚಾಗಬೇಕೆಂದು ತಪಸ್ಸನ್ನಾಚರಿಸುವುದು ಮೂಲ ಉದ್ದೇಶವನ್ನೇ ದೂರಮಾಡಿ ಸ್ವಾರ್ಥತೆಯ ಕೂಪದಲ್ಲಿ ಮುಳುಗಿಸಿಬಿಡುತ್ತದೆ. ಇಂತಹ ತಪಸ್ಸು ಪ್ರಯೋಜನವಿಲ್ಲದ್ದು. ಆದುದರಿಂದ ನಿಜವಾಗಿ ತಪಸ್ಸನ್ನು ಆಚರಿಸುವವನು ಎಂತಹವನಾಗಿರಬೇಕೆಂಬ ಪ್ರಶ್ನೆ ಬಂದೇ ಬರುತ್ತದೆ. ಏಕೆಂದರೆ ತಪೋಸಿದ್ಧಿ ಪಡೆದರೆ ಜೊತೆಯಲ್ಲಿಯೇ ಅದ್ಭುತವಾದ ವಾಕ್‌ಶಕ್ತಿ, ದೃಷ್ಟಿಶಕ್ತಿ, ಮನೋಶಕ್ತಿ, ಕರಗತವಾಗುತ್ತವೆ ಅಂತಹ ಶಕ್ತಿಯನ್ನು ಸದ್ವಿನಿಯೋಗ ಮಾಡುವ ಉದ್ದೇಶವಿದ್ದರೆ ಮಾತ್ರ ಲೋಕಕಲ್ಯಾಣವಾಗುತ್ತದೆ. ಅದು ಬಿಟ್ಟು ತನಗೆ ಶಕ್ತಿ ಬಂದಿದೆಯೆಂದು ವಕ್ರ ಮಾರ್ಗದಲ್ಲಿ ಅದನ್ನು ದುರುಪಯೋಗ ಪಡಿಸಿದರೆ ಬಹಳ ಕೆಡಕಾಗುತ್ತದೆ. ಆದರಿಂದಲೇ ತಪಸ್ಸಿಗೆ ಅರ್ಹರಾರು ? ಅನರ್ಹರಾರು ? ಎಂದು ನಿಶ್ಚಯಿಸಿದರು. ಆದರೆ ನಾವುಗಳು ತಿಳಿದಿರುವಂತೆ ವೃತ್ತಿ ಸಂಬಂಧವಾದ ವರ್ಣಗಳ

ಮೇಲೆ ಅದು ನೆಲೆಸಿಲ್ಲ. ತಪಸ್ಸಿಗೆ ಅರ್ಹನಾದವನು ಉತ್ತಮನು; ಅನರ್ಹನಾದವನು ಕನಿಷ್ಠನು - ಶೂದ್ರನು. ಇಲ್ಲಿ ಶೂದ್ರನೆಂದರೆ ಶೂದ್ರ ವೃತ್ತಿ ಮಾಡುವ ಪಂಗಡವೆಂದು ತಿಳಿದು ಅದಕ್ಕೆ ಅಪಾರ್ಥ ಕಲ್ಪಿಸುವುದು ಸರಿಯಲ್ಲ. ಯಾರಾದರೂ, ಏನಾದರೂ ಒಂದು ಹೇಳಿದರೆ ವಿಶಾಲಭಾವನೆಯಿಂದ ನೋಡಬೇಕು. ಸಂಕೋಚ ದೃಷ್ಟಿಯಿಂದ ನೋಡಿದರೆ ಇಲ್ಲದ ಹಾನಿಗೆ ಕಾರಣವಾಗುತ್ತದೆ.

ತಪಸ್ಸಿಗೆ ಅರ್ಹ - ಅನರ್ಹನೆಂಬ ಪ್ರಶ್ನೆ ಬಂದಾಗ ಪ್ರಯೋಗನಾಗಿರುವ ಈ ಶೂದ್ರ ಪದಕ್ಕೆ ತಪ್ಪು ಅರ್ಥ ಮಾಡಿಕೊಂಡು, ಬ್ರಾಹ್ಮಣರಿಗೆ ಶೂದ್ರ ವರ್ಣದ ಮೇಲೆ ಕನಿಷ್ಠಭಾವನೆ ಇದೆ, ಅವರು ಶೂದ್ರನಿಗೆ ಕೆಡಕನ್ನುಂಟುಮಾಡಲು ಈ ಕಟ್ಟುಗಳನ್ನು ತಂದೊಡ್ಡಿದ್ದಾರೆ ಎಂದು ಹೇಳುವುದು ಸರಿಯಲ್ಲ. ಹಾಗೆ ನಿಜವಾಗಿಯೂ ಬ್ರಾಹ್ಮಣರಿಗೆ ಶೂದ್ರ ವರ್ಣದ ಮೇಲೆ ದ್ವೇಷವಿದ್ದಿದ್ದರೆ ಇಂದು ವಾಲ್ಮೀಕಿಯು ಆದಿಕವಿಯಾಗಿ, ಮಹರ್ಷಿಯಾಗಿ ನಮ್ಮ ಮುಂದೆ ವಿರಾಜಿಸುತ್ತಿರಲಿಲ್ಲ. ವಸಿಷ್ಠ ಮಹರ್ಷಿಗಳು ಅಂತ್ಯಜೆಯನ್ನು ಲಗ್ನವಾಗುತ್ತಿರಲಿಲ್ಲ.

ಪ್ರಾಪಂಚಿಕವಾಗಿ ವರ್ಣಗಳು - ದೇಹ ! ಪಾರಮಾರ್ಥಿಕವಾಗಿ ಮನಸ್ಸು ಭಾವನೆ. ಪಾರಮಾರ್ಥಿಕ ದೃಷ್ಟಿಯಿಂದ ಪ್ರತಿಯೊಂದು ವರ್ಣದಲ್ಲಿಯೂ ಈ ಎರಡು ಪಂಗಡಗಳಿದ್ದೇ ಇವೆ. ಅದೇ ಉತ್ತಮ - ಕನಿಷ್ಠ!

ಇದು ಪೀಠಿಕೆಯಾಗಿ, ಇಲ್ಲಿ ಬರುವ ಸನ್ನಿವೇಶವನ್ನು ನೋಡಿದರೆ, ತಪಸ್ಸನ್ನಾಚರಿಸುತ್ತಿದ್ದ ಶೂದ್ರನನ್ನು ಕೊಲ್ಲೆಂದು ಹೇಳಬೇಕಾದರೆ, ಅವನು ಉದಾತ್ತ ಧ್ಯೇಯದಿಂದ ತಪಸ್ಸನ್ನಾಚರಿಸದೆ, ಪ್ರತಿಸ್ಪರ್ಧೆಯಿಂದ ತಪಸ್ಸನ್ನಾಚರಿಸಬಹುದು ಅನ್ನಿಸುವುದು ಸಹಜ !

ದೇವರ ಪೂಜೆಗೆ ಹೂ ಕೊಯ್ಯುವುದು ನ್ಯಾಯ. ಆದರೆ ಅದಕ್ಕಾಗಿಯೇ ಹೂ ಕಳವುಮಾಡುವುದು ನ್ಯಾಯವಲ್ಲ. ಹೂ ಕದ್ದರೂ ಸ್ವಾರ್ಥಕ್ಕಾಗಿ ಕವಿಯದೆ ದೇವರ ಪೂಜೆಗಾಗಿ ಕದ್ದರೆ ಕ್ಷಮೆಗೆ ಅರ್ಹನು ಹಾಗೆಯೇ ತಪಸ್ಸನ್ನು ಪ್ರತಿಸ್ಪರ್ಧೆಯಿಂದ ಮಾಡಿದರೂ, ಅದನ್ನು ಉಳಿಸಿಕೊಳ್ಳುವ ಶಕ್ತಿ ಇಲ್ಲದಿದ್ದರೂ, ತಪಸ್ಸನ್ನು ಸಾಧಿಸುವ ಶಕ್ತಿ ಇದೆಯಲ್ಲಾ ಎಂದು ಗೌರವಿಸಬಹುದು - ಗಳಿಸುವ ಶಕ್ತಿ ಇದ್ದರೂ ಹೋಗಲಾಡಿಸಿಕೊಂಡುಬಿಡುವನಲ್ಲಾ ಎಂದು ಅನುತಾಪ ಪಡಬಹುದು. ಸಾಧ್ಯವಿದ್ದರೆ ಇಂತಹವರನ್ನು ಎಚ್ಚರಿಸಿ ಸರಿಮಾರ್ಗದಲ್ಲಿ ಬಿಡುವುದು ಉತ್ತಮ. ಈ ದೃಷ್ಟಿಯನ್ನು ತೆಗೆದುಕೊಂಡರೆ ಶ್ರೀರಾಮಚಂದ್ರನು ಶಂಭೂಕನ ಶರೀರವನ್ನು ಕತ್ತರಿಸಲಿಲ್ಲ; ಅವನಲ್ಲಿದ್ದ ಒಂದು ಸಣ್ಣತನವನ್ನು ಕತ್ತರಿಸಿದ - ಮುಂದೆ ಅವನನ್ನು ಎಚ್ಚರಿಸಿದ ಎಂದು ಹೇಳಬಹುದು. ಈ ಭಾವನೆಯೇ ಈ ದೃಶ್ಯ

ದಲ್ಲಿ ಪ್ರಧಾನವಾಗಿದೆ. ಇದು ಮೂಲದಿಂದ ಬೇರೆಯುಲ್ಲ - ಆದ್ದರಿಂದ ವಿದ್ವೇಷಕ್ಕೆ ಕಾರಣವಿಲ್ಲ.

ಬಾಲಕನು ಅಕಾಲ ಮರಣ ಹೊಂದಿದಮೇಲೆ, ಅವನ ವೃದ್ಧ ತಂದೆಯು ಅಯೋಧ್ಯೆಗೆ ಹೋಗಿ ಶ್ರೀರಾಮನನ್ನು ಕರೆತರುವ ಬದಲು ಶ್ರೀರಾಮನು ತಾನಾಗಿಯೇ ಆ ಸ್ಥಳಕ್ಕೆ ಬರುತ್ತಾನೆಂಬುದೊಂದು ಬದಲಾವಣೆ. ಆದರಿಂದ ಮುಖ್ಯ ಉದ್ದೇಶ ಬದಲಾವಣೆಯಾಗದೆ ಶ್ರೀರಾಮನು ಅಲ್ಲಿಗೆ ಬಂದ ರೀತಿ ಮಾತ್ರ ಬದಲಾಗುತ್ತದೆ. ಆ ಸ್ವಾತಂತ್ರ್ಯವನ್ನು ನಾನು ತೆಗೆದುಕೊಂಡಿದ್ದೇನೆ.

ಇನ್ನು ಶ್ರೀರಾಮನು ಸೀತಾದೇವಿಯನ್ನು ಕಳುಹಿಸಿದಾಗ ಆ ತಾಯಿಯ ಮನಸ್ಸಿನ ಸ್ಥಿತಿಯನ್ನು ಬೇರೆಯವರು ಚಿತ್ರಿಸುವುದಕ್ಕಿಂತ ಭಿನ್ನವಾಗಿ ಚಿತ್ರಿಸಲಾಗಿದೆ. ನನ್ನ ಆದರ್ಶದಲ್ಲಿರುವ ಆ ಸೀತಾದೇವಿಯ ಮನೋನಿಗ್ರಹತೆ ನಾನು ಭಾವಿಸಿರುವಂತೆಯೇ ಇದ್ದಿರಬೇಕೆಂದು ನನ್ನ ತಿಳಿವಳಿಕೆ. ಆದರಿಂದ 'ಶ್ರೀರಾಮಚಂದ್ರನು ನಿನ್ನನ್ನು ತ್ಯಜಿಸಿದ್ದಾನೆ - ಕಾಡಿಗೆ ಬಿಟ್ಟು ಬಾ ಎಂದು ಆಜ್ಞಾಪಿಸಿದ್ದಾನೆ' ಎಂದು ಲಕ್ಷ್ಮಣನು ಹೇಳಿದ ಕೂಡಲೇ ಇಲ್ಲಿ ಬರುವ ಸೀತಾದೇವಿ ಬೆಚ್ಚುವುದಿಲ್ಲ, ಬೆದರುವುದಿಲ್ಲ, ಹಲುಬುವುದಿಲ್ಲ' ಕಣ್ಣೀರ್ಗರೆಯುವುದಿಲ್ಲ, ಬಿರುಗಾಳಿಗೆ ಸಿಕ್ಕಿ ಗೊನೆಯೊಡೆದ ಬಾಳೆಯ ಗಿಡದಂತೆ ನೆಲಕ್ಕುರುಳುವುದಿಲ್ಲ - ಶಾಂತವಾಗಿರುತ್ತಾಳೆ! ಆದರ್ಶವನಿತೆಯಾ ತೋರಗೊಳ್ಳುತ್ತಾಳೆ!! ಏಕೆಂದರೆ ಸೀತಾದೇವಿಗೆ ಶ್ರೀರಾಮಚಂದ್ರನ ಮನಸ್ಸು ಸ್ವಭಾವ ಚೆನ್ನಾಗಿ ಗೊತ್ತು. ಅಂತಹ ಶ್ರೀರಾಮಚಂದ್ರನು ಈ ಆಜ್ಞೆ ಹೊರಡಿಸಬೇಕಾದರೆ; ಅದೂ ಸೀತಾದೇವಿಗೆ ತಿಳಿವಳಿಕೆ ಕೊಡದೆ ಆ ಕೆಲಸ ಮಾಡಬೇಕಾದರೆ; ಶ್ರೀರಾಮಚಂದ್ರನ ಮನ ನೊಂದಿರಬೇಕು - ಧರ್ಮಸಂಕಟದಲ್ಲಿ ಸಿಕ್ಕಿರಬೇಕು. ಆದರಿಂದ ಸಂತೋಷದಿಂದ ಅವನಾಜ್ಞೆಯನ್ನು ಪಾಲಿಸಬೇಕಾದುದು ಸತಿಯಾದ ತನ್ನ ಧರ್ಮವೆಂದು ಸೀತಾದೇವಿ ತಿಳಿದಿದ್ದಳು.

ಇದನ್ನು ಓದಿದವರ ಮನಸ್ಸಿನ ಮೇಲೆ ಸತ್ಪರಿಣಾಮವಾದರೆ ಈ ದೃಶ್ಯ ಚಿತ್ರಿಸಿದ್ದು ಸಾರ್ಥಕ!

ಬಸವನಗುಡಿ,
ಬೆಂಗಳೂರು ನಗರ.

ಸಿ. ಕೆ. ನಾಗರಾಜರಾವ್.

# ಶೂದ್ರಮುನಿ

## ದೃಶ್ಯ ೧.

[ಅರಣ್ಯದ ಒಂದು ಭಾಗ. ಅದನ್ನು ನೋಡಿದರೆ ಅರಣ್ಯದಂತೆ ಕಾಣದೆ ಒಂದು ಅಂದವಾದ ಪುಷ್ಪಲತಾಕುಂಜದಂತೆ ಕಾಣುವುದು. ಅರಣ್ಯದ ಭೀಕರತೆಗೆ ಬದಲಾಗಿ ಅಲ್ಲಿ ಶಾಂತಿ, ಸೌಮ್ಯತೆ, ಉಕ್ಕುತ್ತಿದೆ. ಎತ್ತನೋಡಿದರತ್ತ ಹಸುರೇ ಹಸರು; ಎಲ್ಲ ಗಿಡಗಳೂ ಎಲೆ, ಹೂ, ಕಾಯಿ, ಹಣ್ಣುಗಳಿಂದ ತುಂಬಿವೆ. ಆ ವನ ಪ್ರದೇಶದಲ್ಲಿ ಕಾಲಿಟ್ಟರೆ ಮನಸ್ಸಿಗೇನೋ ಒಂದು ಬಗೆಯ ಅನಿರ್ವಚನೀಯವಾದ ಆನಂದವುಂಟಾಗುತ್ತದೆ. ಸೂರ್ಯೋದಯವಾಗಿದೆ; ಆ ವನದೇವಿಯ ಹಸರು ಅಂಬರದಲ್ಲಿ ಜರತಾರಿಯ ಗೆರೆಗಳೋ ಎಂಬಂತೆ ಸೂರ್ಯ ಕಿರಣಗಳು ಹರಡಿ ಕೊಂಡಿವೆ. ದೇವರ ಪೂಜೆಗೆ ಹೂ ಕುಯ್ಯಲು ಒಬ್ಬ ವೃದ್ಧ ಬ್ರಾಹ್ಮಣನೂ, ಅವನ ಹತ್ತು-ಹದಿನಾಲ್ಕು ವರ್ಷದ ಮಗನೂ ಪ್ರವೇಶಿಸುತ್ತಾರೆ. ಇಬ್ಬರ ಕೈಯಲ್ಲಿಯೂ ಹೂ ಬುಟ್ಟಿಗಳು ನೇತಾಡುತ್ತಿವೆ. ವೃದ್ಧನ ಮುಖದಲ್ಲಿ ಬಹಳ ದೂರ ನಡೆದ ಆಯಾಸ ಕಾಣುತ್ತಿದೆ. ಬಾಲಕನ ಮುಖದಲ್ಲಿ ಒಂದು ಬಗೆಯ ಆನಂದೋತ್ಸಾಹ ತಾಂಡವವಾಡುತ್ತಿದೆ.]

**ವೃದ್ಧ ಬ್ರಾಹ್ಮಣ**—ಮಗು ಇನ್ನು ಸಾಕು. ನಡೆ ಹೋಗೋಣ, ಸೂರ್ಯೋದಯವು ಸಹ ಆಗಿಬಿಟ್ಟಿತು. ದೇವತಾರ್ಚನೆಗೆ ಬಹಳ ಹೊತ್ತಾಗುತ್ತದೆ.

**ಬಾಲಕ**—[ಬುಟ್ಟಿಯನ್ನು ತಂದೆಗೆ ತೋರಿಸಿ] ಇಷ್ಟೇ ಸ್ವಲ್ಪ ಹೂ ಸಾಕೇನಪ್ಪ ದೇವರ ಅರ್ಚನೆಗೆ ?

**ವೃ. ಬ್ರಾ**—ಭಕ್ತಿಯಿಂದ ಅರ್ಪಿಸುವ ಒಂದು ದಳ ಸಾಕು ಮಗು, ದೇವನಿಗೆ ತೃಪ್ತನಾಗುತ್ತಾನೆ.

**ಬಾಲಕ**—ನಾವು ಅವನ ಪಾದದಲ್ಲಿ ಅರ್ಪಿಸುವ ಒಂದು ದಳಕ್ಕೆ ಅವನು ತೃಪ್ತಿಪಟ್ಟರೆ ಅದು ದೇವನ ವಿಶಾಲ ಹೃದಯವನ್ನು ತೋರಿಸುತ್ತದೆ. ಅವನು ಒಂದೇ ದಳಕ್ಕೆ ಸಂತೃಪ್ತನಾಗುವನೆಂದು ನಾವು ಒಂದೇ ದಳವನ್ನು ಅರ್ಪಿಸಿಬಿಡುವುದು ನಮ್ಮ ಸಣ್ಣತನವಲ್ಲವೇನಪ್ಪ?

**ವೃ ಬ್ರಾ**—ನಿಜವಾದ ಮಾತನಾಡಿದೆ ಮಗು. ಅಲ್ಪವನ್ನು ಸ್ವೀಕರಿಸಿ ತೃಪ್ತಿಪಡುವ ವಿಶಾಲತನವನ್ನು ದುರುಪಯೋಗಪಡಿಸುವುದು ನಿಜವಾಗಿ

ಸಣ್ಣತನ. ಹೊತ್ತೇರಿದರೂ ಚಿಂತೆಯಿಲ್ಲ. ನಿನ್ನ ಮನಸ್ಸಿಗೆ ತೃಪ್ತಿಯಾಗುವಷ್ಟು ಹೂವನ್ನು ನೀನು ಆಯ್ದುಕೋ.

**ಬಾಲಕ**—[ಸಂತೋಷದಿಂದ] ಸರಿ ಅಪ್ಪ [ಎಂದು ಒಂದು ನಿಮಿಷ ಸುಮ್ಮನಿದ್ದು] ಅಪ್ಪ, ನಾನಿಲ್ಲಿಗೆ ನಿನ್ನ ಜೊತೆಯಲ್ಲಿ ಬರುವುದಕ್ಕೆ ಪ್ರಾರಂಭಿಸಿದಂದಿನಿಂದ ಒಂದು ಪ್ರಶ್ನೆ ಕೇಳಬೇಕೆಂದಿದ್ದೇನೆ—ಕೇಳಲೇ ?

**ವೃ.ಬ್ರಾ**—ಕೇಳು ಮಗು.

**ಬಾಲಕ**—ವರ್ಷದ ಯಾವ ಕಾಲದಲ್ಲೂ ಈ ವನ ಪ್ರದೇಶದಲ್ಲಿ ಯಾವ ಗಿಡವೂ ಒಣಗಿದ್ದೇ ಕಂಡುಬಂದಿಲ್ಲ. ಎಲೆಯುದುರಿ ಗಿಡ ಬೋಳಾದದ್ದಂತೂ ಇಲ್ಲವೇ ಇಲ್ಲ. ಅಲ್ಲದೆ ಇಲ್ಲಿಯ ಗಿಡಗಳೆಲ್ಲ ಸದಾ ಕಾಲದಲ್ಲಿಯೂ ಹಸುರಾಗಿಯೇ ಇರುತ್ತವೆ; ಹೂ, ಕಾಯಿ ಹಣ್ಣುಗಳಿಂದ ತುಂಬಿರುತ್ತವೆ. ಇದಕ್ಕೆ ಕಾರಣವೇನು ?

**ವೃ.ಬ್ರಾ**—ಇದಕ್ಕೆ ಕಾರಣವೇನೆಂದು ಹೇಳುವುದು ಕಷ್ಟ. ನನಗೆ ತಿಳಿದಿರುವ ಮಟ್ಟಿಗೆ, ನಾನು ಕೇಳಿರುವ ಮಟ್ಟಿಗೆ, ಯಾರಾದರೂ ಮಹಾತ್ಮರು ತಪಸ್ಸನ್ನಾಚರಿಸುವ ವನ ಪ್ರದೇಶವು ಹೀಗೆ ನಿತ್ಯಯೌವನದಿಂದ ತುಂಬಿ ತುಳುಕಾಡುತ್ತಿರುತ್ತದೆಯಂತೆ. ಆದುದರಿಂದ ಈ ವನ ಪ್ರದೇಶದಲ್ಲಿ ಯಾರೋ ಒಬ್ಬ ಮಹಾಮುನಿ ತಪಸ್ಸನ್ನಾಚರಿಸುತ್ತಿರಬೇಕೆಂದು ನನ್ನ ಊಹೆ.

**ಬಾಲಕ**—ಹಾಗಾದರೆ ನೀನು ಆ ಮುನಿಯನ್ನು ನೋಡಿಲ್ಲ ?

**ವೃ.ಬ್ರಾ**—ಇಲ್ಲ. ನಾನು ಹುಡುಗನಾಗಿದ್ದಾಗ ಈ ವನಕ್ಕೆ ಬರುವುದಕ್ಕೆ ಜನರೆಲ್ಲ ಹೆದರುತ್ತಿದ್ದರು. ಏಕೆಂದರೆ ಈ ಪ್ರದೇಶ ಆಗ ದುಷ್ಟ ಕಾಡುಮೃಗಗಳಿಂದ ತುಂಬಿ ಭಯಂಕರವಾಗಿತ್ತು. ಬರುಬರುತ್ತ ಆ ಭಯಂಕರ ಸ್ವರೂಪವು ನಾಶವಾಗಿ ಈ ಪ್ರದೇಶವು ಸದಾ ಆನಂದ, ಉಲ್ಲಾಸಗಳನ್ನುಂಟುಮಾಡುವ ಉದ್ಯಾನದಂತೆ ಮಾರ್ಪಾಡಾಗಿ ಹೋಗಿದೆ. ಆದರಿಂದ ನನ್ನ ಊಹೆ ಸರಿಯೆಂದು ನನ್ನ ಭಾವನೆ. ಕಾರಣವಿಲ್ಲದೆ ಈ ಬಗೆಯ ಮಾರ್ಪಾಡಾಗಲು ಖಂಡಿತ ಸಾಧ್ಯವಿಲ್ಲ. ಈಚೆಗೆ ಯಾರೋ ಒಬ್ಬ ಮಹಾಮುನಿಯು ಈ ಕಾಡನ್ನು ತನ್ನ ತಪೋಭೂಮಿಯನ್ನಾಗಿ ಮಾಡಿಕೊಂಡಿರಬೇಕು.

**ಬಾಲಕ**—ಹಾಗೆ ಯಾರಾದರೂ ತಪಸ್ಸನ್ನಾಚರಿಸುತ್ತಿದ್ದರೆ ಅವರು ನಮ್ಮ ಕಣ್ಣಿಗೆ ಕಾಣಿಸಬೇಕಲ್ಲ ?

**ವೃ.ಬ್ರಾ**—ಮಹಾತ್ಮರ ದರ್ಶನ ಲಾಭಕ್ಕೂ ಪುಣ್ಯಬೇಕು ಮಗು. ಅಲ್ಲದೆ ಅವರು ಎಲ್ಲರಿಗೂ ಗೋಚರಿಸುವುದೂ ಇಲ್ಲ.

**ಬಾಲಕ**—ಮಹಾತ್ಮರು ಇವನು ಪಾಪಿಷ್ಠ, ಇವನು ಪುಣ್ಯವಂತ, ಎಂಬ ತಾರತಮ್ಯವನ್ನು ಬಿಟ್ಟು, ಎಲ್ಲರನ್ನೂ ಸಮಾನ ದೃಷ್ಟಿಯಿಂದ ನೋಡ ಬೇಕಲ್ಲವೇನಪ್ಪ? ಪುಣ್ಯವಂತನಿಗಿಂತ ಪಾಪಿಷ್ಠನಿಗೆ ಮಹಾತ್ಮರ ಸಹಾಯ ಹೆಚ್ಚಿಗೆ ಬೇಕಲ್ಲವೇನಪ್ಪ? ಮಹಾತ್ಮರ ಅವತಾರಗಳು, ಅವ ನತಿಹೊಂದಿದ ಪಾಪಿಷ್ಠರ ಉನ್ನತಿಗಲ್ಲವೇನಪ್ಪ? ಅದರಿಂದ ಎಲ್ಲರಿಗೂ ಗೋಚರಿಸಬೇಕಾದುದು ಅವರ ಧರ್ಮವಲ್ಲವೇನಪ್ಪ?

**ವೃ.ಬ್ರಾ**—ನೀನು ಹೇಳುವುದೂ ಸರಿ ಮಗು. ಆದರೆ ಇಂತಹ ಮಹಾತ್ಮರು ತಪೋಸಿದ್ಧಿಗಾಗಿ ನೇಮ ಕೈ ಕೊಂಡಿರುತ್ತಾರೆ. ಆದನ್ನು ಅಕ್ಷರಶಃ ಪಾಲಿಸಿದ ವಿನಹ ಅವರ ತಪಸ್ಸು ಸಿದ್ಧಿಸುವುದಿಲ್ಲ. ತಪಃಸಿದ್ಧಿ ಯಾಗದಿದ್ದರೆ ಆತ್ಮೋದ್ಧಾರವೂ ಇಲ್ಲ. ಲೋಕಕಲ್ಯಾಣವೂ ಇಲ್ಲ. ಅದಕ್ಕಾಗಿ ಅಗೋಚರವಾಗಿರುತ್ತಾರೆ.

**ಬಾಲಕ**—ಆತ್ಮೋದ್ಧಾರಕ್ಕಿಂತ ಲೋಕ ಕಲ್ಯಾಣವೇ ಹೆಚ್ಚಿನದಲ್ಲವೇನಪ್ಪ?

**ವೃ.ಬ್ರಾ**—ಹೌದು ಮಗು ! ಆದರೆ, ಆತ್ಮೋದ್ಧಾರವಾಗದ ವಿನಹ ಲೋಕ ಕಲ್ಯಾಣ ಸರಿಯಾಗಿ ನಡೆಯಲಾರದು.

**ಬಾಲಕ**—ಅದು ಹೇಗೆ ಅಪ್ಪ ? ತನ್ನನ್ನು ತಾನು ಉದ್ಧಾರಮಾಡಿ ಕೊಳ್ಳುವವನು ಸ್ವಾರ್ಥಿಯಾಗುತ್ತಾನೆ. ಇಂತಹ ಸ್ವಾರ್ಥಿ ಲೋಕ ಕಲ್ಯಾಣವನ್ನು ಹೇಗೆ ಮಾಡಬಲ್ಲ ?

**ವೃ.ಬ್ರಾ**—ನೀನು ಆತ್ಮೋದ್ಧಾರವೆಂದರೆ ತನ್ನನ್ನು ತಾನು ಉದ್ಧಾರಮಾಡಿ ಕೊಳ್ಳುವುದು ಎಂದು ತಿಳಿದಿದ್ದೀಯೆ. ಅದು ಸರಿಯಾದರೂ ಅದರ ಅರ್ಥ ನೀನು ಹೇಳಿದಷ್ಟು ಸಂಕೋಚವಾಗದೆ ಇನ್ನೂ ವಿಶಾಲವಾಗಿದೆ. ಅದು ಬರೀ ಸ್ವಾರ್ಥತೆಯಲ್ಲೇ ನಿಂತಿಲ್ಲ.

**ಬಾಲಕ**—ಅದು ಸ್ವಾರ್ಥತೆಯಲ್ಲದೇ ಮತ್ತೇನು ಅಪ್ಪ?

**ವೃ ಬ್ರಾ**—ಹೇಳುತ್ತೇನೆ ಕೇಳು. ಲೋಕಕಲ್ಯಾಣವನ್ನು ಮಾಡಲು ಕಂಕಣ ತೊಟ್ಟ ಮಹಾತ್ಮರು, ಮುನಿಗಳು, ತಪಸ್ವಿಗಳು ಮೊದಲು ತಮ್ಮನ್ನು ತಾವು ಸರಿಪಡಿಸಿಕೊಳ್ಳುತ್ತಾರೆ. ತಮ್ಮ ಜೀವನ, ನಡೆ, ನುಡಿ ಇವುಗಳಲ್ಲಿ ಸತ್ಯವನ್ನು ಪಾಲಿಸುತ್ತಾರೆ; ಕಲ್ಯಾಣವನ್ನು ಬಯಸುತ್ತಾರೆ; ಅವನ್ನು ಅನುಭವಿಸುತ್ತಾರೆ; ಆಳವನ್ನು ಅಳೆದು ತಿಳಿಯುತ್ತಾರೆ. ಆಮೇಲೆ ಇತರರಿಗೆ ಹೇಳುತ್ತಾರೆ. ತಾವು ಆಚರಣೆಯಲ್ಲಿ ತಂದ ಸತ್ಯವನ್ನ, ಜೀವನದಲ್ಲಿ ಬೆರಸಿಕೊಂಡು ಬಂದ ಕಲ್ಯಾಣವನ್ನ, ನುಡಿದಂತೆ ನಡೆಯೆಂಬ ಆದರ್ಶವನ್ನ ಲೋಕವಲ್ಲಿ ಸಾರುತ್ತಾ ಹೋಗುತ್ತಾರೆ. ಅದನ್ನೆಲ್ಲ ಸಾಧ್ಯವೆಂದು ತೋರಿಸುತ್ತಾ ಹೋಗುತ್ತಾರೆ. ಸಾರುತ್ತಾ ಹೋಗುವುದು ಲೋಕಕಲ್ಯಾಣಕ್ಕೆ; ಅವನ್ನು ತೋರಿಸುತ್ತಾ ಹೋಗುವುದು ಲೋಕಕಲ್ಯಾಣಕ್ಕೆ – ಲೋಕದ ನಂಬಿಕೆಗೆ. ಲೋಕದ ನಂಬಿಕೆಗೆ ತೋರಿಸಲು ಸಿದ್ಧಪಡಿಸುವುದೇ ಆತ್ಮೋದ್ಧಾರ. ಈ ಬಗೆಯಾಗಿ ಆತ್ಮೋದ್ಧಾರ ಪಡೆದು ನಂತರ ಲೋಕಕಲ್ಯಾಣವನ್ನುಂಟುಮಾಡಲು ಪ್ರಯತ್ನಿಸುವುದೇ ಉತ್ತಮ. ಆದುದರಿಂದ ಆತ್ಮೋದ್ಧಾರ ಸ್ವಾರ್ಥವಲ್ಲವೆಂದು ನಾನು ಹೇಳುವುದು. ಇಂತಹ ಯಾರೋ ಮಹಾತ್ಮರು ಈ ಸ್ಥಳದಲ್ಲಿ ತಪಸ್ಸನ್ನಾಚರಿಸುತ್ತಿರಬೇಕು.

**ಬಾಲಕ**—ಆತ್ಮೋದ್ಧಾರದ ಸಿದ್ಧಿ ಪಡೆದನಂತರವಾದರೂ ಆ ಮಹಾತ್ಮರ ದರ್ಶನವಾಗುವುದೇ ?

**ವೃ.ಬ್ರಾ**—ಖಂಡಿತವಾಗಿ ಅವರ ದರ್ಶನವಾಗುವುದು ಮಗು.

**ಬಾಲಕ**—ಅಂದಿಗೆ ನಾನು ಧನ್ಯ! ಅಂತಹ ಮಹಾತ್ಮರು ಇಲ್ಲಿ ತಪಸ್ಸನ್ನಾಚರಿಸುತ್ತಿರುವುದು ನಿಜವಾದರೆ, ಈ ವನ ಪ್ರದೇಶವು ನಿಜವಾಗಿ ಪುಣ್ಯಭೂಮಿ. ಇಂತಹ ಪುಣ್ಯಭೂಮಿಯಿಂದ ಆಯ್ದ ಹೂಗಳ ಅರ್ಚನೆಯಿಂದ ದೇವರಿಗೆ ಹೆಚ್ಚಿನ ತೃಪ್ತಿ ಅಲ್ಲವೇನಪ್ಪ?

**ವೃ.ಬ್ರಾ**—ಹೌದು ಮಗು.

**ಬಾಲಕ**—ಮಾತಿನಲ್ಲಿ ತುಂಬ ಹೊತ್ತು ಕಳೆದೆ. ಇನ್ನು ಜಾಗ್ರತೆ ಹೂ ಆಯ್ದು ತರುತ್ತೇನೆ. [ಎದುರಿಗೆ ಕೈ ತೋರಿಸಿ] ಅಗೋ, ಅಲ್ಲಿ

ನೋಡಪ್ಪಾ, ನಾನಾ ವರ್ಣದ ಹೂಗಳು ಒಂದೇ ಪೊದೆಯಾಗಿ ಬೆಳೆದಿದೆ. ಅಲ್ಲಿಗೆ ಹೋಗಿಬಿಟ್ಟರೆ ಸಾಕಷ್ಟು ಹೂ ಒಂದೇ ಸ್ಥಳದಲ್ಲಿ ಸಿಕ್ಕುತ್ತೆ.

ವೃ ಬ್ರಾ—ನಡಿ ಮಗು.. ನಾನಲ್ಲಿಯೇ ಪುರವಡಿಯಲ್ಲಿ ಕುಳಿತಿರುತ್ತೇನೆ. ನೀನು ಬೇಗನೆ ಹೂಗಳನ್ನು ಕೀಳು. ಜಾಗತ್ರೆ ಮನೆಗೆ ಹೋಗೋಣ ವಂತೆ. ಪೂಜೆಗೆ ವೇಳೆಯಾಗುತ್ತದೆ.

ಬಾಲಕ—ಹಾಗೆಯೇ ಆಗಲಿ ಅಪ್ಪ [ಎಂದು ಜಾಗ್ರತೆ ಜಾಗ್ರತೆ ತಾನು ಹಿಂದೆ ಕೈ ತೋರಿಸಿದೆಡೆ ಹೋಗುತ್ತಾನೆ. ವೃದ್ಧ ಬ್ರಾಹ್ಮಣನು ಅವನನ್ನು ನಿಧಾನ ವಾಗಿ ಹಿಂಬಾಲಿಸುತ್ತಾನೆ.

ಇತ್ತಲಿಂದ ಅಯೋಧ್ಯಾಪತಿ, ಶ್ರೀರಾಮಚಂದ್ರನು, ಲೋಕಾಪವಾದ ಕ್ಕಾಗಿ ಹೆದರಿ, ರಾಜ ಧರ್ಮ ಪಾಲಿಸಲು, ಪ್ರಜಾ ವತ್ಸಲತೆಯನ್ನು ಪಡೆಯಲು ತನ್ನ ಮಡದಿ ಜಾನಕಿಯನ್ನು- ತುಂಬು ಗರ್ಭಿಣಿಯನ್ನು ತ್ಯಜಿಸಿ ಕಾಡಿಗೆ ಕಳುಹಿಸಿ ರಾಜನಾಗಿ ಮಾಡಿದುದಕ್ಕೆ ರಾಮನಾಗಿ ಸಂಕಟ ಅನು ಭವಿಸುತ್ತಾ ಮನಸ್ಸಿನ ತಾಪವನ್ನಾರಿಸಿಕೊಳ್ಳುವ ಸಲುವಾಗಿ ಅಯೋಧ್ಯೆ ಬಿಟ್ಟು ದೇಶ ಸಂಚಾರಮಾಡಿಕೊಂಡು ಬರುತ್ತಾನೆ. ಅವನ ಮುಖಭಾವ ಅವನು ಅನುಭವಿಸುತ್ತಿರುವ ಅನುಸಂಕಟವನ್ನು ಎತ್ತಿ ತೋರುತ್ತಿದೆ. ಲಕ್ಷ್ಮಣ ನೆಂದಿನಂತೆ ಶಾಂತ ಮುಖಭಾವದಿಂದ ಅವನನ್ನು ಹಿಂಬಾಲಿಸಿದ್ದಾನೆ. ರಾಜ ಯೋಗ್ಯವಾದ ಉಡುಪನ್ನು ಇಬ್ಬರೂ ಧರಿಸಿದ್ದಾರೆ.]

ಶ್ರೀರಾಮ—ಹೇಳು ಲಕ್ಷ್ಮಣಾ! ಜಾನಕಿಯ ವಿಚಾರವನ್ನು ಹೇಳು; ಇನ್ನೂ ಹೇಳು; ಎಷ್ಟು ಕೇಳಿದರೂ ತೃಪ್ತಿಯಾಗದು.

ಲಕ್ಷ್ಮಣ—ಇನ್ನೇನು ಹೇಳಲಿ ಅಣ್ಣ. ಆ ಜಗನ್ಮಾತೆಯ ಶಾಂತತೆ, ಮನೋ ನಿಗ್ರಹತೆ ಇಡೀ ಪ್ರಪಂಚವನ್ನೇ ಮುಗ್ಧಗೊಳಿಸುತ್ತವೆ. ತುಂಬು ಗರ್ಭಿಣಿಯಾದ ಆ ಪರಮಪಾವನೆಯನ್ನು ಕಾಡೊಳಗಿರಿಸಿ ಕೈಬಿಟ್ಟು ಬರುವ ಕೆಲಸವನ್ನು ಮಾಡುವುದು ನಿನಗೆ ತಿಳಿದಂತೆ, ರಾಜಾಜ್ಞೆ ಯಿಂದ ನನ್ನ ಪಾಲಿಗೆ ಬಿತ್ತು. ನನ್ನನ್ನು ನಾನು ವಂಚಿಸಿಕೊಂಡು ರಾಜಾಜ್ಞೆಯನ್ನು ಪಾಲಿಸಬೇಕಾಯಿತು. ಅದಕ್ಕೂ ಸಂತೋಷದಿಂದ ಆ ಪುನೀತೆ ಬೆಂಬಲವಿತ್ತಳು.

ಶ್ರೀರಾಮ—ನನ್ನ ಸೀತೆ ನಿನಗೆ ರಾಜಾಜ್ಞೆಯನ್ನು ಪಾಲಿಸಲು ಬೆಂಬಲ ವಿತ್ತಳೇ?

**ಲಕ್ಷ್ಮಣ**—ಹೌದು ಅಣ್ಣಾ! ಸಂಕಟದಿಂದ ನನ್ನ ಕಣ್ಣೀರು ಹರಿದುಹೋಗು ತ್ತಿತ್ತು. ನನ್ನನ್ನು ಸಮಾಧಾನ ಮಾಡಿ, ಕತ್ತಲು ಕವಿದ ನನ್ನ ಮನಸ್ಸನ್ನೂ ಎಚ್ಚರಗೊಳಿಸಿ ಕರ್ತವ್ಯಪಾಲನೆಗೆ ನೆರವಾದಳು ಆ ಜಗನ್ಮಾತೆ.

**ಶ್ರೀರಾಮ**—[ಹನಿಗಣ್ಣಾಗಿ] ಹೇಳು ಸೌಮಿತ್ರಿ! ಸೀತೆಯಾಡಿದ ಒಂದೊಂದು ನುಡಿಯನ್ನೂ ಹೇಳು. ನಿನ್ನ ಬಾಯಿಂದಲಾದರೂ ಸೀತೆಯಾಡಿದ ನುಡಿಗಳು ನನ್ನ ಕಿವಿಗೆ ಬೀಳಲಿ. ಅವಳ ಶಾಂತ ನುಡಿಗಳನ್ನಾದರೂ ಕೇಳಿ, ಅಲ್ಲೋಲ ಕಲ್ಲೋಲವಾಗಿರುವ ನನ್ನ ಮನಸ್ಸು ಸಮಾಧಾನ ಹೊಂದಲಿ. ಹೇಳು! ಹೇಳು!!

**ಲಕ್ಷ್ಮಣ**—ರಾಜಾಜ್ಞೆಯನ್ನು ತಿಳಿಸಲು ಮನಸ್ಸು ಹಿಂಜರಿದು, ಹಿಂಜರಿದು ಇಕ್ಕಟ್ಟಿನಲ್ಲಿ ಸಿಕ್ಕಿಕೊಂಡಾಗ—ಆ ಕಟುವಾದ ಆಜ್ಞೆಯನ್ನು ನಾನು ಬಾಯಿಂದ ಉಚ್ಚರಿಸಲಾರದೆ ಮುಖ ಮುಚ್ಚಿಕೊಂಡಾಗ.... [ಗಂಟಲು ಸಂಕಟದಿಂದ ಗದ್ಗದಿತವಾಗುವುದು.]

**ಶ್ರೀರಾಮ**—[ಒಂದೆರಡು ಕ್ಷಣ ಕಾದು] ಏನು ಹೇಳಿದಳು ಜಾನಕಿ?

**ಲಕ್ಷ್ಮಣ**—'ನಾನಿರಲು ನಿಮಗೇತರ ಚಿಂತೆ ಮಗು? ನಿನಗೇತರ ದುಗುಡ ಮಗು? ನಿನ್ನ ಮನಸ್ಸು ಯಾವುದೋ ಉಭಯ ಸಂಕಟಕ್ಕೆ ಸಿಕ್ಕಿ ಕೊಂಡು ತೊಳಲುತ್ತಿರುವಂತೆ ಕಾಣುತ್ತದೆ. ಹೇಳು. ಮನಸ್ಸಿ ನೊಳಗಿರುವುದನ್ನು ಹೇಳು. ತಾಯಿಯು ಮಗನಿಗೆ ಯಾವುದಕ್ಕೂ ಇಲ್ಲವೆನ್ನುವುದಿಲ್ಲ' ಎಂದಳು ಆ ನನ್ನ ಜನನಿ.

**ಶ್ರೀರಾಮ**—ಅಜಗಜಾಂತರ! ರಾಜನಾಗಿ ಆಜ್ಞೆ ಇತ್ತೆ. ಮನುಜನಾಗಿ—ರಾಮನಾಗಿ ಮರುಗುತ್ತಿದ್ದೇನೆ. ಇದೊಂದುಬಗೆಯ ಆತ್ಮಹತ್ಯೆ! ಲಕ್ಷ್ಮಣಾ! ಆತ್ಮಹತ್ಯೆ!!

**ಲಕ್ಷ್ಮಣ**—ನೀನಿಂದು ಆಡುತ್ತಿರುವುದನ್ನು ಆ ತಾಯಿ ಅಂದೇ ಆಡಿದರು ಅಣ್ಣಾ!

**ಶ್ರೀರಾಮ**—ಏನು ಆಡಿದಳು?

**ಲಕ್ಷ್ಮಣ**—ರಾಜಾಜ್ಞೆಯನ್ನು ಕೇಳಿದಳು ಆ ತಾಯಿ!

**ಶ್ರೀರಾಮ**—ಕೇಳಿ?

ಲಕ್ಷ್ಮಣ—ಇನ್ನೊಬ್ಬರಾಗಿದ್ದರೆ ಬಿರುಗಾಳಿಗೆ ಸಿಕ್ಕಿ ಗೊನೆಯೊಡೆದ ಬಾಳೆಯ ಗಿಡದಂತೆ ನೆಲಕ್ಕುರುಳುತ್ತಿದ್ದರು. ಆದರೆ ಆ ತಾಯಿ ಬೆಚ್ಚಲಿಲ್ಲ, ಬೆದರಲಿಲ್ಲ, ಹಲುಬಲಿಲ್ಲ, ಕಣ್ಣೀರ್ಗರೆಯಲಿಲ್ಲ, ಶಾಂತ ಮೂರ್ತಿಯಾಗಿ 'ಮಗು ಲಕ್ಷ್ಮಣಾ, ನೀನೀವರೆಗೆ ನನಗೆ ಈ ಆಜ್ಞೆಯನ್ನು ತಿಳಿಸದಿದ್ದ ರಿಂದ ಒಳ್ಳೆಯದನ್ನು ಮಾಡಿದಂತಾಗಲಿಲ್ಲ. ನೀನಿಲ್ಲಿಂನ್ನೊಂದು ಕ್ಷಣವೂ ನಿಲ್ಲಬೇಡ. ಈ ಕೂಡಲೇ ನಡೆ. ಈ ರಾಜಾಜ್ಞೆಯಿಂದ ನನ್ನ ಶ್ರೀರಾಮದೇವನ ಕೋಮಲ ಹೃದಯ ನೂರುಹೋಳಾಗಿ ಹೋಗಿದೆ. ನೀನಲ್ಲದೆ ಬೇರಾರೂ ನನ್ನ ದೇವನನ್ನು ಸಮಾಧಾನ ಪಡಿಸಲಾರರು. ನಡೆ' ಎಂದು ನನ್ನನ್ನು ಅಲ್ಲೊಂದು ಕ್ಷಣ ನಿಲ್ಲಗೊಡದೆ ಆ ಗೊಂಡಾರಣ್ಯದಿಂದ ನನ್ನನ್ನು ಕಳುಹಿದಳು ಆ ಕಲ್ಯಾಣಮಾತೆ.

ಶ್ರೀರಾಮ—ಸೀತೆ ನನ್ನನ್ನು ಚೆನ್ನಾಗಿ ಅರಿತಿದ್ದಾಳೆ. ನಾನವಳನ್ನು ಅರಿಯ ಲಿಲ್ಲ. ಅವಳು ಶಾಂತತೆಯಿಂದ ತನ್ನ ಕರ್ತವ್ಯ ಪಾಲಿಸಿದಳು. ಅಶಾಂತಿಯ ಅಲೆಯಲ್ಲಿ ನನ್ನ ಕರ್ತವ್ಯಪಾಲನೆ ತೂರಾಡುತ್ತಿದೆ.

ಲಕ್ಷ್ಮಣ—ಅಣ್ಣಾ! ಮತ್ತೆ ಮತ್ತೆ ಅದೇ ಮಾತನ್ನೇ ಆಡುತ್ತಿರಬೇಡ. ಮನಸ್ಸಿನ ಸಮಾಧಾನಕ್ಕಾಗಿ ಸುತ್ತಾಡಿ ಬರಬೇಕೆಂದು ಬಂದ ನೀನು, ಮತ್ತೆ ಮತ್ತೆ ಅದನ್ನೇ ನೆನೆದು ಕೊರಗಬೇಡ. ದೇವ ಸಮಾನನಾದ, ಸೂತ್ರಧಾರಿಯಾದ ನೀನೇ ಹೀಗೆ ಅಶಾಂತಿಯ ಸುಳಿಯಲ್ಲಿ ಸಿಕ್ಕಿಬಿದ್ದರೆ ನಮ್ಮಗಳ ಪಾಡೇನು ? ನೀನೊಬ್ಬನು ಶಾಂತಿಯಿಂದಿದ್ದರೆ, ಸಮಾಧಾನ ದಿಂದಿದ್ದರೆ ಇಡೀ ರಾಜ್ಯವೆಲ್ಲ ಶಾಂತಿಮಯವಾಗಿರುತ್ತದೆ ; ಸಮಾಧಾನ ದಿಂದಿರುತ್ತದೆ. ದೈವಸ್ವರೂಪಿ ರಾಜನಿಗೆ ಮನೋನೆಮ್ಮದಿ ಇಲ್ಲವೆಂದು, ಶಾಂತಿ ಇಲ್ಲವೆಂದು ತಿಳಿದು ಯಾವ ಪ್ರಜೆತಾನೆ ಸುಖದಿಂದಿದ್ದಾನು ? ಪ್ರಜೆಗಳನ್ನು ಸಂತೋಷದಿಂದಿಡುವುದು ರಾಜನ ಕರ್ತವ್ಯವಲ್ಲವೇ ?

ಶ್ರೀರಾಮ—ನನಗೆ ಈಗ ಯಾವುದೂ ಬೇಕಾಗಿಲ್ಲ.

ಲಕ್ಷ್ಮಣ—ನಿನಗೆ ಯಾವುದೂ ಬೇಕಿಲ್ಲವಾಗಿರಬಹುದು. ಆದರೆ ಎಲ್ಲರಿಗೂ ನೀನು ಬೇಕಾಗಿದ್ದೀಯೆ. ಮನಸ್ಸನ್ನು ಸಮಾಧಾನ ಪಡಿಸಿಕೋ.

ರಾಜಧಾನಿಯನ್ನು ಬಿಟ್ಟು ಬಹಳ ದಿವಸಗಳಾದವು. ಜಾಗ್ರತೆ ಹಿಂತಿರುಗೋಣ.

**ಶ್ರೀರಾಮ**—ಅದಂತಿರಲಿ. ನಾವು ಹಿಂದೆಯೂ ಇದೇ ರೀತಿ ಸುತ್ತಿದೆವು. ಆಗಲೂ ಸೀತೆ ಇರಲಿಲ್ಲ. ಇಂದೂ ಸುತ್ತುತ್ತಿದ್ದೇವೆ. ಇಂದೂ ಸೀತೆ ಇಲ್ಲ. ಆದರೆ ಮನಸ್ಸಿನ ಸ್ಥಿತಿಯಲ್ಲಿ ಅಂದಿಗೆ ಇಂದಿಗೆ ಎಷ್ಟು ಭೇದ?

**ಲಕ್ಷ್ಮಣ**—ಅಂದು ಸೀತಾಮಾತೆಯನ್ನು ಅರಸುತ್ತಿದ್ದೆವು. ಇಂದು ಶಾಂತಿಯನ್ನು ಅರಸುತ್ತಿದ್ದೇವೆ.

**ಶ್ರೀರಾಮ**—ಭ್ರಾಂತಿ! ಭ್ರಾಂತಿ!! ಶಾಂತಿಯೇ ಮೂರ್ತಿಭವಿಸಿದ್ದ ಜಾನಕಿಯನ್ನೇ ಕಳುಹಿಸಿಬಿಟ್ಟಮೇಲೆ ನಾವಿನ್ನು ಶಾಂತಿಯನ್ನೆಲ್ಲಿ ಹುಡುಕುವುದು? ಅದು ಸಿಗುವುದಾದರೂ ಎಲ್ಲಿ?

**ಲಕ್ಷ್ಮಣ**—ನಾನದನ್ನು ಹೇಳಲು ಶಕ್ತನೇ? ಸರ್ವಶಕ್ತನಾದ ನಿನಗೆ ಯಾರು ಹೇಳಲು ಸಾಧ್ಯ?

**ಶ್ರೀರಾಮ**—ನನ್ನ ಕಣ್ಣಿಗೆ ಎಲ್ಲವೂ ಅದಲು ಬದಲಾಗಿ ಕಾಣುತ್ತಿದೆ. ಹಿಂದೆ ನಾವಿಲ್ಲಿ ಬಂದಾಗ ಗೊಂಡಾರಣ್ಯವಿತ್ತಲ್ಲವೆ?

**ಲಕ್ಷ್ಮಣ**—ಹೌದು.

**ಶ್ರೀರಾಮ**—ಆದರೆ ಈಗ ಇದು ನನ್ನ ಕಣ್ಣಿಗೆ ಉದ್ಯಾನವಿದ್ದಹಾಗೆ ಕಾಣುತ್ತಿದೆ.

**ಲಕ್ಷ್ಮಣ**—ನಿನ್ನ ಕಣ್ಣಿಗೇನು—ನನ್ನ ಕಣ್ಣಿಗೂ ಉದ್ಯಾನವಿದ್ದಹಾಗೆಯೇ ಕಾಣುತ್ತಿದೆ. ಆನಂದವನ್ನು ಉಕ್ಕಿಸುವ ಈ ಪ್ರಕೃತಿದೇವಿಯ ವಿಚಿತ್ರ ಲೀಲೆಯನ್ನು ನೋಡುತ್ತಿದ್ದರೆ ಮನಸ್ಸಿಗೆಷ್ಟೋ ಉಲ್ಲಾಸ ಉಂಟಾಗುತ್ತದೆ; ಶಾಂತತೆ ದೊರೆಯುತ್ತದೆ.

**ಶ್ರೀರಾಮ**—ಅದು ಸರಿ. ಆದರೆ ಈ ಬದಲಾವಣೆಗೆ ಕಾರಣ?

**ಲಕ್ಷ್ಮಣ**—ಯಾರೋ ಮಹಾತ್ಮರು ಇದನ್ನು ತಮ್ಮ ತಪೋಭೂಮಿಯಾಗಿ ಮಾಡಿಕೊಂಡಿರಬೇಕು.

**ಶ್ರೀರಾಮ**—ಇರಬೇಕು!

**ಲಕ್ಷ್ಮಣ**– ಮಾರ್ಗಾಯಾಸದಿಂದ ನಿನ್ನ ಮುಖ ಬಾಡಿದೆ. [ಎದುರಿಗೆ ಕೈ ತೋರಿಸಿ] ಅಗೋ ಅಲ್ಲಿ ವಿಶ್ರಮಿಸಿಕೊಳ್ಳಲು ಅನುಕೂಲವಾದ ಸ್ಥಳ ವಿದ್ದಂತೆ ಕಾಣುತ್ತದೆ. ನಡೆ ಅಣ್ಣಾ ಅಲ್ಲಿಗೆ ಹೋಗೋಣ.

**ಶ್ರೀರಾಮ**—ಆಯಾಸವೂ ಆಗಿದೆ. ನೀರಡಿಕೆಯೂ ಆಗುತ್ತಿದೆ. ಕೊಂಚ ನೀರನ್ನು ತೆಗೆದುಕೊಂಡುಬಂದು ಉಪಕರಿಸುವಿಯಾ ?

**ಲಕ್ಷ್ಮಣ**—ಆಗಲಿ ಅಣ್ಣಾ! ನೀನಲ್ಲಿ ವಿಶ್ರಮಿಸಿಕೋ, ನಾನು ನೀರನ್ನು ತರುವೆನು.

[ಬಂದ ದಾರಿಯಲ್ಲಿ ಲಕ್ಷ್ಮಣನೂ, ಎದುರು ದಾರಿಯಲ್ಲಿ ಶ್ರೀರಾಮನೂ ನಿಷ್ಕ್ರಮಿಸುವರು.]

---

## ದೃಶ್ಯ ೨.

[ಅದೇ ಅರಣ್ಯದ ಇನ್ನೊಂದು ಭಾಗ. ಎದುರಿಗೆ ದೊಡ್ಡ ವಟ ವೃಕ್ಷ. ಅಂದವಾದ ನಾನಾ ಬಣ್ಣದ ಹೂ ಗಿಡಗಳು ಕಣ್ಣಿಗೆ ಆನಂದವನ್ನುಂಟುಮಾಡುತ್ತಿವೆ. ವೃದ್ಧಬ್ರಾಹ್ಮಣನು ಆ ವಟ ವೃಕ್ಷದಡಿಯಲ್ಲಿ ವಿಶ್ರಮಿಸಿಕೊಳ್ಳುತ್ತಿರುವನು.]

**ವೃ.ಬ್ರಾ**—[ಪಕ್ಕಕ್ಕೆ ತಿರುಗಿ] ಮಗು ಹೊತ್ತು ಬಹಳ ಏರಿತು. ಜಾಗ್ರತೆ ಏಳು.

**ಬಾಲಕ**—[ನೇಪಥ್ಯದೊಳಗಿನಿಂದಲೇ] ಇಗೋ ಇದೊಂದೇ ಒಂದು ಹೂವಪ್ಪಾ. ಇದನ್ನು ಕಿತ್ತುಕೊಂಡು ಬಂದುಬಿಡುತ್ತೇನೆ.

**ವೃ.ಬ್ರಾ**— ಇನ್ನೊಂದು, ಇನ್ನೊಂದು ಎಂದು ಎಷ್ಟು ಹೊತ್ತಾಯಿತು ಮಗು ? ನಾವಿನ್ನು ಮನೆಗೆ ಹೋಗಿ ಪೂಜಾದಿಗಳನ್ನು ಮುಗಿಸಿಕೊಂಡು ಭೋಜನ ಮಾಡುವುದೆಂದಿಗೆ. ನಿನ್ನ ಹೂವಿನ ಆಸೆಯಲ್ಲಿ ನಿನಗೆ ಹೊತ್ತು ಗೊತ್ತಾಗುವುದೇ ಇಲ್ಲ. ನನಗಂತೂ ಕೂತು ಕೂತು ಬೇಸರ ವಾಯಿತು [ಎಂದು ಎದ್ದು ಮೈಮುರಿದು ಬುಟ್ಟಿ ಹಿಡಿದು] ನಾನು ನಿಧಾನ ವಾಗಿ ಹೋಗುತ್ತಿರುತ್ತೇನೆ. ಆದಷ್ಟು ಜಾಗ್ರತೆ ಬಂದುಬಿಡು.

**ಬಾಲಕ**—[ನೇಪಥ್ಯದೊಳಗಿನಿಂದಲೇ] ಇಗೋ ಬಂದುಬಿಟ್ಟೆ. ನೀನು ಹೋಗುತ್ತಿರು. ಹತ್ತುಮಾರು ಹೋಗುವುದರೊಳಗೆ ಬಂದುಬಿಟ್ಟೆ.

ವೃ.ಬ್ರಾ—ಸರಿ. ಅಷ್ಟುಮಾಡಿದರೆ ನೀನು ತುಂಬಾ ಒಳ್ಳೆಯವನು [ಎಂದು ನಿಧಾನವಾಗಿ ನಡೆಯುತ್ತಾ ಬಾಲಕನ ಧ್ವನಿಬಂದ ಎದುರು ಭಾಗದಿಂದ ಹೊರಟುಹೋಗುತ್ತಾನೆ.

ಒಂದೆರಡು ನಿಮಿಷ ಗಭೀರ ಮೌನ. ಅನಂತರದಲ್ಲಿ ಛಟ ಛಟ ಎಂದು ನೇಪಥ್ಯದಿಂದ ಶಬ್ದವು ಕೇಳಿ ಬರುವುದು. ಅದನ್ನು ಹೊಂದಿಕೊಂಡಂತೆಯೇ "ಅಯ್ಯೋ ಅಪ್ಪಾ!" ಎಂಬ ಆರ್ತನಾದವೂ ಕೇಳಿಬರುವುದು. ಇತ್ತಲಿಂದ "ಏನು ಮಗು ? ಏನು ಮಗು ?" ಎನ್ನುತ್ತಾ ಸರಸರನೆ ವೃದ್ಧ ಬ್ರಾಹ್ಮಣನು ಬರುವನು. ಅವನು ರಂಗದ ಮಧ್ಯಕ್ಕೆ ಬರುವಹೊತ್ತಿಗೆ ಸರಿಯಾಗಿ "ಸಾಯಿ !" ಎಂಬ ಗಡಸು ಶಬ್ದವು ಹೊರಬೀಳುವುದು. ಇದನ್ನು ಕೇಳಿದೊಡನೆಯೇ ಆತುರದಿಂದ ಮುನ್ನುಗ್ಗುತ್ತಿದ್ದ ಆ ವೃದ್ಧಬ್ರಾಹ್ಮಣನು ಹಿಮ್ಮೆಟ್ಟಿ ದಿಕ್ಕುತೋಚದೆ ಶಿಲಾ ಪ್ರತಿಮೆಯಂತೆ ನಿಂತುಬಿಡುವನು. ಪ್ರಜ್ಞಾಶೂನ್ಯನಾದ ಆ ಬಾಲಕನು ಒದೆ ತಿಂದವನಂತೆ ಉರುಳಿಕೊಂಡು ರಂಗದೊಳಕ್ಕೆ ಬರುವನು. ಇಷ್ಟುಹೊತ್ತು ದಿಗ್ಭ್ರಮೆ ಹಿಡಿದಿದ್ದ ವೃದ್ಧ ಬ್ರಾಹ್ಮಣನು ಆ ಬಾಲಕನ ಬಳಿ ಹಾರಿ ಅವನನ್ನು ಎತ್ತಿ ತೊಡೆಯಮೇಲಿಟ್ಟು ಕೊಂಡು ಗದ್ಗದಿತನಾಗಿ]

ವೃ.ಬ್ರಾ—ಅಯ್ಯೋ....ಏನಾಯಿತು....ಮಗು....ಮಗು[ಬಾಲಕನ ಮೈಕುಲುಕಿ] ಮಗು....ಮಾತನಾಡು....ಮಗು.... [ಬಾಲಕನ ತಲೆ, ಕಾಲು, ಮೈಗಳನ್ನು ಮುಟ್ಟಿ] ಇಲ್ಲ....ಇನ್ನು....ಮಗು ಇಲ್ಲ....ನನ್ನ ಮಗು ನನಗೆ ಇಲ್ಲ.... ಇದಕ್ಕಾಗಿ ನಾನು ಇಲ್ಲಿಗೆ ಇಂದು ನಿನ್ನೊಡನೆ ಬಂದೆನೆ ? ನಿನ್ನನ್ನು ಇಲ್ಲಿ ಆಹುತಿ ಕೊಡಲೆಂದು ಕರೆತಂದೆನೆ ?....ಮಗು....ನನ್ನನ್ನು ಅಗಲಿ ಹೋದೆಯಾ ?....ನನ್ನಿಂದ ಎಂದೆಂಧಿಗೂ ದೂರವಾದೆಯಾ ?.... ಯ್ಯೋ ನನ್ನ ಮುದ್ದುಗುವರ....ಈ ನನ್ನ ಮುದಿತನದಲ್ಲಿ ನನಗೆ ಊರುಗೋಲಿನಂತಿದ್ದೆಯಲ್ಲೋ ...ನನಗೆ ನೀನೊಬ್ಬನೆ ಮಗನಾಗಿದ್ದೆ ....ನನ್ನ ಕಣ್ಣು ನೀನೇ ಆಗಿದ್ದೆ ...ನೀನಿಲ್ಲದೆ ನಾನು ಕುರುಡನಾದೆ ನಲ್ಲಾ....ಇನ್ನೂ ಬೆಳೆದು, ಬಾಳಿ, ಬಹಳ ಕಾಲ ಇರಬೇಕಾದ ವಯಸ್ಸು....ಅಂತಹದರಲ್ಲಿಯೇ ನನ್ನ ಜೀವನ ಕುಸುಮವು ಒಣಗಿ ಉದುರಿಯೋಯಿತೆ ?....ಅಯ್ಯೋ ದೇವರೆ ಇದೂ ನಿನಗೊಪ್ಪಿತೇ ? ಅಯ್ಯೋ [ಎಂದು ಮಗನನ್ನು ಎತ್ತಿ ಎದೆಗವುಚಿಕೊಂಡು]....ಮಗು....

ವಗು....[ಎಂದು ಬಿಕ್ಕಿ ಬಿಕ್ಕಿ ಅಳುತ್ತಾ ಮಗನ ಮುಖದಮೇಲೆ ತನ ಕೆನ್ನೆಯಿಟ್ಟು ನೆಟ್ಟದೃಷ್ಟಿಯಲ್ಲಿ ನೋಡುತ್ತಿರುವಂತೆಯೇ ಅಳುವು ಕಡಿಮ್ಮೆ ಯಾಗಿ ಕೊಂಚ ಸಮಾಧಾನವಾದಂತಾಗಿ] ಇಂತಹ ಅಕಾಲ ಮರಣ .. ನನ್ನ ಮಗನಿಗೆ ಇಂತಹ ಅಕಾಲ ಮರಣ ?....ಆಶ್ಚರ್ಯ....ಮಹಾ ಮಹಿಮನಾದ....ದೈವಸ್ವರೂಪಿ....ಶ್ರೀರಾಮಚಂದ್ರನ ರಾಜ್ಯದಲ್ಲಿ ಈ ಅನ್ಯಾಯವೇ ?....ಈ ಅಪಮೃತ್ಯುವೇ ?....ಅಪಮೃತ್ಯು [ಇತ್ತಲಿಂದ ನಿಧಾನವಾಗಿ ದುಃಖದಿಂದ ಬೆಂಪ ಶ್ರೀರಾಮಚಂದ್ರನು ಪ್ರವೇಶಿಸುವನು.] ..ಈ ಪುಣ್ಯಯುಗದಲ್ಲಿ ..ರಾಮರಾಜ್ಯದಲ್ಲಿ....ಕಾರಣ ?....ಹಿಂದಿನ ದಾವ ಜನ್ಮದ ಪಾಪಶೇಷವೋ ...ಇಲ್ಲ ಹಿಂದಿನ ಜನ್ಮದಲ್ಲಿ ಪಾಪ ಶೇಷವಿದ್ದಿದ್ದರೆ ನನಗೆಲ್ಲಿ ಈ ಜನ್ಮದಲ್ಲಿ ಮನುಷ್ಯ ಜನ್ಮದ ಪುಣ್ಯ ... ಮತ್ತೆ? ಹಿಂದೆ ಕಂಡಿಲ್ಲ ...ಕೇಳಿಲ್ಲ ...ನಾನೆಂದೂ ಬಾಯಿಂದ ಕೆಟ್ಟ ಮಾತನಾಡಲಿಲ್ಲ......ಇನ್ನೊಬ್ಬರ ಮನಸ್ಸನ್ನು ನೋಯಿಸಲಿಲ್ಲ...... ಸುಳ್ಳನ್ನು ಆಡಿಲ್ಲ ....ಮತ್ತೆ. ...ಈ ಅಪಮೃತ್ಯು....ಮುಪ್ಪಿನ ತಂದೆಯ ಎದುರಿಗೆ ಎಳೆ ಬಾಲಕನ ಸಾವು ?....ಇರಬೇಕು....ಯಾವುದೋ ತಪ್ಪು ಇರಬೇಕು....ನಮ್ಮದೇ ಯಾವುದೋ ತಪ್ಪು....ಭಾರಿ ತಪ್ಪು ಇರಬೇಕು ....ನಮ್ಮ ತಪ್ಪಿಲ್ಲದಿದ್ದರೆ ಇಂತಹ ಘೋರ ಪಾಪ ಬಂದು ನಮ್ಮ ತಲೆಗೆ ಸುತ್ತಿಕೊಳ್ಳಲು ಸಾಧ್ಯವೇ ಇರುತ್ತಿರಲಿಲ್ಲ....ವಿಧಿಯೆಂದಿಗೂ ಅಧರ್ಮ ವನ್ನಾಚರಿಸುವುದಿಲ್ಲ ...ಹು....ಆದದ್ದಾಯಿತು....ಚಿಂತಿಸಿ ಏನು ಫಲ.... ಹಣೆಬರಹ ತಪ್ಪಿದ್ದಾರಿಗೆ?...[ಕೊಂಚಹೊತ್ತು ಯೋಚನಾಮಗ್ನನಾಗಿದ್ದು] ಆದರೂ....ರಾಮರಾಜ್ಯದಲ್ಲಿ ಇದು ನಡೆಯಬೇಕೆ ? ರಾಮರಾಜ್ಯದಲ್ಲಿ ಅಕಾಲಮರಣವಾಯಿತು ಎಂಬ ನುಡಿ ಶಾಶ್ವತವಾಗಿ ನಿಲ್ಲುವಹಾಗಾ ಯಿತೆ ?....ಇರಬಾರದು......ನಮ್ಮಂತ ಪಾಪಿಗಳು ರಾಮರಾಜ್ಯದಲ್ಲಿ ಇರಬಾರದು ..ಈಗ ರಾಮರಾಜ್ಯ ತೊರೆದುಹೋದರೇನಾಯಿತು ? ಸಾವಿರ ಚಿತ್ತಾರ ಒಂದು ಮಸಿ ನುಂಗಿತು ಎಂದಂತಾಗುತ್ತದೆ. ಅಯ್ಯೋ ....ಮಗನು ಹೋದನೆಂಬ ದುಃಖವನ್ನು ಸಮಾಧಾನ ಮಾಡಿಕೊಳ್ಳಲೇ ರಾಮರಾಜ್ಯದಲ್ಲಿ ಹೀಗಾಯಿತಲ್ಲಾ ಎಂಬ ಚಿಂತೆ....ನನ್ನಿಂದ - ನನ್ನ ವಂಶದಿಂದ ಹೀಗಾಯಿತಲ್ಲಾ ಎಂಬ ಉದ್ವೇಗವನ್ನು ಹೇಗೆ ಸಮಾಧಾನ

ಪಡಿಸಿಕೊಳ್ಳಲಿ ? ಇದೇ ಕಾರಣವಾಗಿ . .ನನ್ನ ಇಂತಹುದೇ ತಪ್ಪಿಗಾಗಿ ಹೀಗೆ ಆಯಿತು ...ನೀನು ಈ ಬಗೆಯ ಪ್ರಾಯಶ್ಚಿತ್ತಕ್ಕೆ ಸಿದ್ಧನಾದರೆ ಈ ದೋಷಹರಣವಾಗುತ್ತದೆಯೆಂದು ಯಾರಾದರೂ ನನಗೆ ತಿಳಿವಳಿಕೆ ಕೊಟ್ಟರೆ ? .ಅದೆಷ್ಟೇ ಕಷ್ಟದ್ದಾದರೂ ಚಿಂತೆಯಿಲ್ಲ ...ಮಾಡುತ್ತೇನೆ ನಮ್ಮ ರಾಜನಿಗೆ ಕಳಂಕ ತಪ್ಪಿದರೆ ಸಾಕು .ನಾನು ಧನ್ಯ ..ದೇವರೇ ... ಯಾರನ್ನಾದರೂ ಮಾರ್ಗದರ್ಶಕರನ್ನು ಕರುಣಿಸು [ಎಂದು ಮೇಲೆ ನೋಡುತ್ತಾ ಕಣ್ಮುಚ್ಚಿ ಕೈಮುಗಿಯುತ್ತಾನೆ.]

ಶ್ರೀರಾಮ—[ತನ್ನಲ್ಲಿಯೇ] ಈ ವೃದ್ಧನ ಈ ದುಃಖದ ಮುಖವು, ನನ್ನ ಪಿತೃ ದೇವನನ್ನು ಅಗಲಿ ನಾನು ಕಾಡಿಗೆ ಹೋದಾಗ ನನ್ನ ಪಿತೃವಿನ ಮುಖದ ಜ್ಞಾಪಕವನ್ನು ಮನಸ್ಸಿಗೆ ತರುತ್ತಿದೆ. ಸೀತೆಯನ್ನಗಲಿ ಅನುಭವಿಸು ತ್ತಿರುವ ದುಃಖಜ್ವಾಲೆಯು ಕಡಿಮೆಯಾಗುವಂತೆ ಭಾಸವಾಗುವ ಹೊತ್ತಿಗೆ ಸರಿಯಾಗಿ ಈ ವೃದ್ಧನ ದುಃಖ ಜ್ವಾಲೆಯು ನನ್ನ ಜ್ವಾಲೆ ಯನ್ನು ಪ್ರಜ್ವಲಿಸುತ್ತಿದೆ. ಅಯ್ಯೋ ನನ್ನ ಬಾಳುವೆಗೆ ಯಾವಾಗಲೂ ಅಳುವೇ ಸಂಗೀತವಾಯ್ತೇ.

ವೃ-ಬ್ರಾ—[ಕಣ್ಬಿಟ್ಟು, ದೀರ್ಘವಾಗಿ ಉಸಿರೆಳೆದು ಸುತ್ತಲೂ ನೋಡುತ್ತಾನೆ. ಶ್ರೀರಾಮಚಂದ್ರನು ಇವನೆಡೆ ಬೆನ್ನುಮಾಡಿ ನಿಂತಿರುತ್ತಾನೆ.] ಯಾರು ? ಯಾರದು ? ನಾನು ಮೊರೆಯಿಟ್ಟು ಕೇಳಿದಾ ಮಾರ್ಗದರ್ಶಕನೇ ?

ಶ್ರೀರಾಮ—[ಗಂಭೀರವಾಗಿ ಅತ್ತ ತಿರುಗಿ] ದ್ವಿಜೋತ್ತಮಾ !

ವೃ.ಬ್ರಾ—[ಆಶ್ಚರ್ಯದಿಂದ] ಯಾರು ? ಶ್ರೀರಾಮದೇವ ? [ಎಂದು ಎವೆ ಯಿಕ್ಕದೆ ಶ್ರೀರಾಮಚಂದ್ರನನ್ನು ನೋಡುತ್ತಾ ತೊಡೆಯಮೇಲಿದ್ದ ಬಾಲಕನ ಶವವನ್ನು ಕೆಳಗೆ ಮಲಗಿಸಿ] ಧನ್ಯ! ನಾನೇ ಧನ್ಯ!! [ಎಂದು ಎದ್ದು ಶ್ರೀರಾಮಚಂದ್ರನ ಬಳಿಗೆ ಬಂದು ನಮಸ್ಕರಿಸಲೋಸುಗ ಬಗ್ಗುತ್ತಾನೆ.]

ಶ್ರೀರಾಮ—[ಅವನನ್ನು ಭುಜ ಹಿಡಿದು ಮೇಲಕ್ಕೆತ್ತಿ] ದ್ವಿಜವರ್ಯ ! ಏಳಿ. ತಾವು ವಯಸ್ಸಿನಲ್ಲಿ ಹಿರಿಯರು ; ಕುಲದಲ್ಲಿ ಹಿರಿಯರು ; ತಿಳಿವಳಿಕೆ ಯಲ್ಲಿ ಹಿರಿಯರು ; ನೀವು ನನ್ನ ಕಾಲಿಗೆರಗುವುದೇ ?

ವೃ.ಬ್ರಾ—ಶ್ರೀರಾಮಚಂದ್ರ ನೆನೆದೊಡನೆಯೇ ಪ್ರತ್ಯಕ್ಷನಾದ ನೀನು ದೈವ ಸ್ವರೂಪಿ. ನಿನ್ನ ಪಾದಸ್ಪರ್ಶಮಾಡುವ ಭಾಗ್ಯ ಎಲ್ಲರಿಗೂ ದೊರೆಯು

ವುದಿಲ್ಲ. ನನ್ನನ್ನು ನೀನು ಅಡ್ಡಿಪಡಿಸಬೇಡ. ಇನ್ನು ಕುಲದಲ್ಲಿ ಹಿರಿಯನೆಂದೆ. ಕುಲವೆಂದರೆ ಯಾವುದು ದೇವ ? ನಿನಗೆ ತಿಳಿಯದೆ ? ನನ್ನನ್ನು ಹಂಗಿಸಲು ಕುಲದ ಮಾತನ್ನು ಹೇಳುವೆಯಾ ?

ಶ್ರೀರಾಮ—ರಾಮನೆಂದಾದರೂ ಇನ್ನೊಬ್ಬರನ್ನು ಹಂಗಿಸುವ ಸಣ್ಣತನಕ್ಕೆ ಇಳಿದಾನೆಂಬ ಭರವಸೆ ನಿಮಗೆ ಇದೆಯೇ ವಿಪ್ರೋತ್ತಮಾ ?

ವೃ.ಬ್ರಾ—ದೇವ ! ಕ್ಷಮಿಸು ! ಅಪಚಾರದ ಮಾತನಾಡಿದೆ. ನನ್ನ ಮನಸ್ಸಿನ ಭ್ರಾಂತಿ, ಬಾಯಿಂದ ಆ ಮಾತನ್ನಾಡಿತು. ನನ್ನ ಭಾವನೆ ಯಲ್ಲಿ ಯಾವಾಗಲೂ ಸ್ವಾತ್ವಿಕ ಕರ್ಮಗಳನ್ನು ಮಾಡುವ ಸತ್ವಗುಣ ಮೂರ್ತಿ ಯಾವವರ್ಣದವನೇ ಇರಲಿ ಅವನೇ ಉತ್ತಮ ಕುಲದವನು.

ಶ್ರೀರಾಮ—ನಿಮ್ಮ ಈ ಉದಾರವಾದ, ಉದಾತ್ತವಾದ ಮಾತಿಗೆ ಯಾರಾ ದರೂ ಮಣಿಯಲೇಬೇಕು. ಇಂತಹ ವಿಶಾಲವಾದ ಭಾವನೆಯುಳ್ಳ ನಿಮಗಿಂತ ಉತ್ತಮ ಕುಲದವರು ಯಾರು ? ನಿಮ್ಮ ಒಬ್ಬನೇ ಒಬ್ಬ ನಾದ ಪುತ್ರನ ಮರಣದ ದುಃಖಕ್ಕಿಂತ ಹೆಚ್ಚಾಗಿ ಇನ್ನೊಬ್ಬರ ಹೆಸರಿಗೆ ಈ ಸಾವಿನಿಂದ ಕಳಂಕ ಬರಬಹುದೆಂಬ ಶಂಕೆಯಿಂದ ಅನುತಾಪ ಪಡುವ ನಿಮ್ಮ ಈ ಕೋಮಲ ಹೃದಯ, ದೂರ ದೃಷ್ಟಿಯೇ ನಿಮ್ಮ ಉತ್ತಮ ಕುಲಕ್ಕೆ ಸಾಕ್ಷಿ. ನಿಮ್ಮ ದುಃಖವನ್ನು ನಾನು ನಿಮ್ಮಿಂದ ಹೇಗೆತಾನೆ ತೆಗೆದುಕೊಳ್ಳಲಿ.

ವೃ.ಬ್ರಾ—ದೇವ ! ನಿನ್ನ ದುಃಖವೇ ನಿನಗೆ ತಡೆದುಕೊಳ್ಳಲು ಅಸಾಧ್ಯವಾದು ದಾಗಿರುವಾಗ ಇನ್ನೊಬ್ಬರ ದುಃಖದ ಚಿಂತೆಯನ್ನು ನೀನು ಮನಸ್ಸಿಗೆ ಹಚ್ಚಿಕೊಳ್ಳಬೇಡ.

ಶ್ರೀರಾಮ—ನನ್ನ ದುಃಖ ಹಾಗಿರಲಿ. ಈ ನಿಮ್ಮ ಕುಮಾರನ ಅಕಸ್ಮಾತ್ ಮರಣಕ್ಕೆ ಕಾರಣವೇನು ?

ವೃ.ಬ್ರಾ—ದೇವತಾರ್ಚನೆಗೆ ಹೂ ಕೀಳಲು ನಾವಿಬ್ಬರೂ ಈ ಪ್ರದೇಶಕ್ಕೆ ಬರುವುದು ನಿತ್ಯವಾಡಿಕೆ. ಅಂತೆಯೇ ಈ ದಿನವೂ ಬಂದೆವು. ಈ ನನ್ನ ಕಣ್ಮಣಿಗೆ ಹೂಗಳೆಂದರೆ ಪ್ರಾಣ. ದೇವರಿಗೆ ರಾಶಿ ಹೂ ಅರ್ಪಿಸಿದರೂ ಅವನ ಮನಸ್ಸಿಗೆ ತೃಪ್ತಿಯಾಗುವುದಿಲ್ಲ.

ಶ್ರೀರಾಮ—ಇದು ಸತ್ಕುಲ ಪ್ರಸೂತ ಸುಗುಣಿಯ ಹಂಬಲ !.... ಮುಂದೆ ?

ವೃ.ಬ್ರಾ—ಈ ದಿನ ಹೂ ಕೀಳುತ್ತ ಇಲ್ಲಿಗೆ ಬಂದೆವು. ಅವನಿಗಾಗಿ ಕಾದು ಸಾಕಾಗಿ, ನಾನೆದ್ದು ಮುಂದೆ ಹೋಗುವಂತೆ ನಟನೆಮಾಡಿದರೆ ಜಾಗ್ರತೆ ಬಂದಾನೆಂದು ಮನೆಯ ದಾರಿ ಹಿಡಿದೆ. ಹತ್ತುಮಾರು ಹೋಗಿರಬಹುದು 'ಅಪ್ಪಾ!' ಎಂಬ ಅವನ ಆರ್ತಧ್ವನಿ ಕೇಳಿಸಿತು. ಬೆಚ್ಚಿ ಹಿಂತಿರುಗಿದೆ. ಹುಡುಗ ಕಾಣಲಿಲ್ಲ. ಸರಸರನೆ ಓಡಿಬಂದೆ. [ವೃದ್ಧನ ಧ್ವನಿಯು ಬರುಬರುತ್ತಾ ಗದ್ಗದವಾಗುತ್ತಾ ಬರುವುದು] ಇದ್ದಕ್ಕಿದ್ದಂತೆ 'ಸಾಯಿ' ಎಂಬ ಭಯಂಕರ ಶಬ್ದ ಝೇಂಕರಿಸಿತು. ಆ ಧ್ವನಿ ಎತ್ತಲಿಂದ ಬಂತೆಂದು ಸಹ ನನಗೆ ಗೊತ್ತಾಗಲಿಲ್ಲ. ಕಕ್ಕಾವಿಕ್ಕಿಯಾಗಿ ಸುತ್ತಲೂ ನೋಡಲು ಪ್ರಯತ್ನಿಸಿದೆ. ಆಗಲಿಲ್ಲ. ಬಾಲಕನು ಹೂ ಕೀಳುತ್ತಿದ್ದ ಕಡೆಗೆ ಮುಂದುವರಿಯಲು ಪ್ರಯತ್ನಪಟ್ಟೆ. ಕಣ್ಣುಗಳು ಮಂಜು ಮಂಜಾದವು. ಒಂದೆರಡು ಕ್ಷಣ ಸುತ್ತಲೂ ಅಂಧಕಾರಮಯವಾದಂತೆ ಭಾಸವಾಯಿತು. ನನಗೆ ನಾನೆಲ್ಲಿರುವನೆಂಬುದೇ ಗೊತ್ತಾಗದೇಹೋಯಿತು. ನಿಧಾನವಾಗಿ ಮತ್ತೆ ಬೆಳಕು ಮೂಡಿದಂತಾಗಿ ಕತ್ತಲು ಮಾಯವಾಗುತ್ತಾ ಬಂತು. ಕಣ್ಣುಜ್ಜಿಕೊಂಡು ಮತ್ತೆ ಕಣ್ಣರಳಿಸಿ ನೋಡಿದೆ. ಎಲ್ಲವೂ ಅವೇ! ನನ್ನ ಬಾಲಕನು ಆ ಪೊದೆಯಿಂದ ಉರುಳುತ್ತಾ ಬಂದು [ಬಾಲಕನ ಶವವಿರುವ ತಾವನ್ನು ತೋರಿಸಿ] ಅಲ್ಲಿ ಬಿದ್ದ. ಅವಸ ಬಳಿ ಬಂದು ತೊಡೆಯ ಮೇಲೆತ್ತಿ ನೋಡಿದೆ ... ... ಅವನಾತ್ಮ ಹಾರಿಹೋಗಿತ್ತು. ನನ್ನೊಬ್ಬನೆ ಮಗು ಕೈಬಿಟ್ಟು ಹೋಗಿದ್ದ. ನನ್ನದಾವತಪ್ಪಿದ್ದರೂ ಅದಕ್ಕೆ ಪ್ರಾಯಶ್ಚಿತ್ತ ಮಾಡಿಕೊಳ್ಳುತ್ತೇನೆ. ರಾಮರಾಜ್ಯದಲ್ಲಿ ಅಕಾಲ ಮರಣ ಸಂಭವಿಸಿತೆಂದು ಯಾರೂ ಆಡದಂತಾಗಲಿ. ನನಗೆ ನೀನೇ ದಾರಿ ತೋರಿಸಬೇಕು ದೇವ.

ಶ್ರೀರಾಮ—ನನ್ನ ರಾಜ್ಯದಲ್ಲಿ ಅಕಾಲ ಮರಣವಾಗಬೇಕಾದರೆ ನಾನು ಯಾವುದೋ ತಪ್ಪು ಮಾಡಿರಬೇಕು.

ವೃ.ಬ್ರಾ—ಎಂತಹ ವಿಚಿತ್ರ ಮಾತನಾಡುವೆ ದೇವ? ನಿನ್ನಿಂದ ತಪ್ಪೆ? ನಿನ್ನಿಂದ ತಪ್ಪೆಂದು ನುಡಿಯುವ ಶಕ್ತಿ ಯಾವ ನಾಲಿಗೆಗೂ ಇರಲಾರದು. ಪ್ರಜಾ ವತ್ಸಲತೆಗಾಗಿ ಲೋಕಾಪವಾದಕ್ಕಾಗಿ ನಿನ್ನರ್ಧಾಂಗಿ

ಯನ್ನ, ಅಗ್ನಿಪ್ರವೇಶ ಮಾಡಿ ಪರಿಶುದ್ಧೆಯೆಂದು ಪ್ರಪಂಚಕ್ಕೆ ತೋರಿ ಬಂದಿದ್ದ ಸೀತಾಮಾತೆಯನ್ನ, ತುಂಬು ಗರ್ಭಿಣಿಯನ್ನ, ನಿನ್ನ ಆತ್ಮಕ್ಕೆ ವಿರೋಧವಾಗಿದ್ದರೂ, ಅದರಿಂದ ನಿನಗೆ ಅಗಾಧವಾದ ಮನಃ ಕ್ಲೇಶವಾಗುವುದಾಗಿದ್ದರೂ ಲಕ್ಷಿಸದೆ, ಕಾಡಿಗೆ ಕಳುಹಿಸಿದ ನಿನ್ನಿಂದ ತಪ್ಪಾಗುವುದೇ ? ಇಲ್ಲ ! ಇಲ್ಲ !! ಎಂದಿಗೂ ಸಾಧ್ಯವಿಲ್ಲ !!!

ಶ್ರೀರಾಮ—ಯಾರ ತಪ್ಪೇ ಆಗಲಿ, ಈ ಸಾವಿಗೆ ಕಾರಣವೇನೆಂದು ಅರಿಯದೆ ಏನುತಾನೆ ಮಾಡಲು ಸಾಧ್ಯ?

[ನೇಪಥ್ಯದಿಂದ "ನಿಜವಾಡಿದೆ" ಎಂಬ ಧ್ವನಿ ಹೊರಬೀಳುವುದು. ವೃದ್ಧಬ್ರಾಹ್ಮಣನು, ಶ್ರೀರಾಮಚಂದ್ರನೂ ಅತ್ತ ನೋಡುವರು. ಜಟಧಾರಿಯಾದ ಧೀರ್ಘಾಕಾರನಾದ ಒಬ್ಬ ಮುನಿಯು ನಿಧಾನವಾಗಿ ಇವರಿಬ್ಬರನ್ನೂ ನೆಟ್ಟ ದೃಷ್ಟಿಯಲ್ಲಿ ನೋಡುತ್ತಾ ಪ್ರವೇಶಿಸುವನು.]

ಮುನಿ—ಈ ಹುಡುಗನು ನನ್ನ ತಪೋಭಂಗ ಮಾಡಿ ಮೃತಿಹೊಂದಿದ್ದಾನೆ!

ವೃ.ಬ್ರಾ—ನನ್ನ ಬಾಲಕನೆಂದೆಂದಿಗೂ ಹಾಗೆ ಮಾಡಲಾರ. ನಾನಿದನ್ನು ಖಂಡಿತ ನಂಬಲಾರೆ. ಅವನು ತಪೋಭಂಗ ಮಾಡುವನೇ ? ದೇವರು ಬ್ರಾಹ್ಮಣರಲ್ಲಿ ಅಪಾರ ಭಕ್ತಿಯುಳ್ಳ ನನ್ನ ಮಗನು ತಪೋಭಂಗ ಮಾಡುವನೆ ? ಇಲ್ಲ ! ನಾನು ನಂಬಲಾರೆ.

ಮುನಿ—ಅವನಿಗೆ ದೇವರಲ್ಲಿ, ಬ್ರಾಹ್ಮಣರಲ್ಲಿ ಭಕ್ತಿ ಇರಬಹುದು. ನಾನು ದೇವನೂ ಅಲ್ಲ ; ಬ್ರಾಹ್ಮಣನೂ ಅಲ್ಲ !

ಶ್ರೀರಾಮ—ಅಂದರೆ

ಮುನಿ—ನಾನು ಶೂದ್ರ! ಶೂದ್ರನಾದ ನಾನು ತಪಸ್ಸು ಮಾಡುವುದನ್ನು ಈ ದ್ವಿಜ ಪುತ್ರನು ಸಹಿಸದೆ ನನ್ನ ತಪೋಭಂಗ ಮಾಡಿದ್ದಾನೆ.

ಶ್ರೀರಾಮ—ಮುನಿಗಳೇ ! ತಾವು ಈ ಮಾತಿನಲ್ಲಿ ಸಂಪೂರ್ಣ ನಂಬಿಕೆ ಇಡುವಿರಾ ?

ಮುನಿ—ನಂಬಿಕೆ ಇಡದಿದ್ದರೆ ನಾನೇತಕ್ಕೆ ಇವನನ್ನು 'ಸಾಯಿ' ಎಂದು ಶಪಿಸುತ್ತಿದ್ದೆ?

ಶ್ರೀರಾಮ—ಹಾಗಾದರೆ ತಮ್ಮ ಶಾಪಕ್ಕೆ ಈ ಬಾಲಕನು ಆಹುತಿಯಾಗಿದ್ದಾನೆ?

ಮುನಿ—ಆಹುತಿಯಲ್ಲ! ತಾನು ಮಾಡಿದ ತಪ್ಪಿಗೆ ಪ್ರಾಯಶ್ಚಿತ್ತ ಪಡೆದಿದ್ದಾನೆ. ನಾನು ಜನ್ಮವೆತ್ತಿದ್ದು ಇಂದಿಗೆ ಸಾರ್ಥಕವಾಯಿತು. ಶೂದ್ರ ತಪಸ್ಸಿಗೆ ಅಯೋಗ್ಯ, ಅವನಿಗೆ ಅಧಿಕಾರವಿಲ್ಲವೆಂದು ಸಾರುತ್ತಿದ್ದ ಬ್ರಾಹ್ಮಣನಿಗೇ ಶೂದ್ರನ ತಪಃಶಕ್ತಿಯನ್ನು ತೋರಿಸಿದಂತಾಯಿತು

ವೃ.ಬ್ರಾ—ಮುನಿಗಳೇ, ನನ್ನ ಬಾಲಕನು ತಮಗೆ ಅಪಚಾರವೆಸಗಿದನೆಂದು—ತಮ್ಮ ತಪೋಭಂಗ ಮಾಡಿದನೆಂದು ನಾನೀಗಲೂ ಖಂಡಿತ ನಂಬಲಾರೆ. ಅವನಿಂದ ತಮಗೇನಾದರೂ ಅಪಚಾರವಾಗಿದ್ದರೆ ಅವನು ತಿಳಿಯದೆ ಮಾಡಿರಬಹುದು. ಹಾಗೆ ತಿಳಿಯದೆ ಮಾಡಿದ್ದರೆ ಅವನು ಕ್ಷಮೆಗೆ ಅರ್ಹನಲ್ಲವೆ? [ಕೈಮುಗಿದು] ತಾವು ದಯಮಾಡಿ ನನಗೆ ಪುತ್ರದಾನಮಾಡಬೇಕು. ಸದ್ಗತಿದಾಯಕನಾದ ಇವನೊಬ್ಬನೇ ನನಗೆ ಮಗ. ದಯಮಾಡಿ ಪುತ್ರದಾನಮಾಡಿ.

ಮುನಿ—ಸಾಧ್ಯವಿಲ್ಲ. ಅವನು ಅನುಭವಿಸಲೇಬೇಕು. ಅರಿಯದೆ ಬೆಂಕಿಯಲ್ಲಿ ಕೈಯಿಟ್ಟರೆ ಅದು ಸುಡದೆ ಬಿಡುವುದೇ?

ವೃ.ಬ್ರಾ—ಮುನಿಗಳೇ! ತಾವು ಹಿರಿಯರು, ಜ್ಞಾನಿಗಳು, ತಪೋಸಿದ್ಧಿ ಪಡೆದ ಮಹಾಮಹಿಮರು, ತಮ್ಮ ಮುಂದೆ ನಾನು ನಿಜವಾಗಿಯೂ ಅಲ್ಪನು. ತಮ್ಮ ಶಕ್ತಿಯ ಮುಂದೆ ನಾನೇನು ಮಾಡಬಲ್ಲೆ? 'ಪುತ್ರದಾನಮಾಡಿ' ಎಂದು ಭಕ್ತಿಯಿಂದ ಅಂಗಲಾಚಿಕೊಳ್ಳಬಲ್ಲೆ. ತಪೋಸಿದ್ಧಿ ಪಡೆದ ಮಹಾತ್ಮರಾದ ತಮಗೆ ಕ್ಷಮಾಗುಣವು ಮುಕುಟಮಣಿಯಲ್ಲವೇ? ದೊಡ್ಡಮನಸ್ಸು ಮಾಡಿ, ಹೇಗಾದರೂ ಮಾಡಿ ಪುತ್ರದಾನಮಾಡಿ. [ಕಣ್ಣೀರ್ಗರೆಯುತ್ತಾನೆ]

ಮುನಿ—ನಿಮ್ಮ ಮರಳು ಮಾತುಗಳಿಂದ ನಾನು ಮೋಸಹೋಗಲಾರೆ. ನಾನು ಒಮ್ಮೆ ಕೊಟ್ಟ ಶಾಪವನ್ನು ನಾನೇ ಹಿಂದಕ್ಕೆ ತೆಗೆದುಕೊಳ್ಳಲೆ? ಅದು ಖಂಡಿತ ಸಾಧ್ಯವಿಲ್ಲ. ಒಮ್ಮೆ ಮುಂದಿಟ್ಟ ಹೆಜ್ಜೆಯನ್ನು ಏನೇ ಆಗಲಿ ಹಿಂತೆಗೆಯಲು ನನ್ನಿಂದ ಸಾಧ್ಯವಿಲ್ಲ.

ವೃ.ಬ್ರಾ—ಮುನಿಗಳೇ! ನನಗಾಗಿ ಬೇಡ. ಶ್ರೀರಾಮಚಂದ್ರನಿಗಾಗಿ, ರಾಮರಾಜ್ಯಕ್ಕೆ ಬಂದಿರುವ ಕಳಂಕವನ್ನು ದೂರಮಾಡುವ ಸಲುವಾಗಿ

ಈ ಹುಡುಗನನ್ನು ಬದುಕಿಸಿಕೊಡಿ. ಅವನು ಬದುಕಿದರೆ ಅವನನ್ನು ಜೀವಮಾನ ಪರಿಯಂತ ತಮ್ಮ ಸೇವೆಯಲ್ಲಿ ನಿಯೋಗಿಸುತ್ತೇನೆ. ತಮ್ಮಂತಹ ತಪಸ್ವಿಗಳ, ಮುನಿಗಳ ಸೇವೆಗಿಂತ ಹೆಚ್ಚಾಗಿ ಅವನಿಗೆ ಬೇಕಾದುದಾದರೂ ಇನ್ನೇನು? ತಪಸ್ವಿಗಳ ಸೇವೆ, ಈಶಸೇವೆ ಎರಡೂ ಒಂದೇ ಅಲ್ಲವೇ?

ಶ್ರೀರಾಮ—[ಸ್ವಗತ] ತತ್ವಪ್ರಧಾನಿಯಾದ, ಗುಣಪ್ರಧಾನಿಯಾದ, ಶಾಂತ ಮತಿಯಾದ ಈತನ ವಿಶಾಲ ದೃಷ್ಟಿಯನ್ನು ಎಷ್ಟು ಶ್ಲಾಘಿಸಿದರೂ ತೀರದು! ಉತ್ತಮ ಕುಲ ಜನಿತನಲ್ಲವೇ ಈ ವೇದವೇತ್ತ! ಆದರಿಂದಲೇ ಈ ಸದ್ಗುಣಗಳು. [ಪ್ರಕಾಶ] ದ್ವಿಜೋತ್ತಮ! ನೀನು ಸತ್ಯವಾಗಿ ಸರ್ವಪೂಜ್ಯ.

ವೃ.ಬ್ರಾ—ದೇವ! ನಾನು ಪೂಜ್ಯತೆಗೆ ಅರ್ಹನಲ್ಲ. ನನ್ನಲ್ಲಿ ಗಮನಾರ್ಹ ವಾದ ಅಂತಹ ಯಾವ ಘನತೆಯೂ ಇಲ್ಲ. ಹಾಗೆ ಇದೆಯೆಂಬು ನಿನಗೆ ಕಂಡುಬಂದಿದ್ದರೆ ಅದು ನಿನ್ನ ಹಿರಿಮೆಗೆ ಸಾಕ್ಷಿ. ನಾನು ಹೇಳಿದುದು ಗುಣಪ್ರಧಾನವಾದ ಸರ್ವಸಮತಾದೃಷ್ಟಿ–ಜಾತಿ ಮತ ಬೇಧಗಳೆನ್ನದೆ ಪ್ರತಿಯೊಬ್ಬ ಮಾನವನಲ್ಲಿಯೂ ಇರಬೇಕಾದ ಭಾವನೆ. ದೇವ, ಈಗ ಅದಂತಿರಲಿ. ನೀನು ಹೇಗಾದರೂ ಮಾಡಿ ನನ್ನ ಕುಮಾರನನ್ನು ಬದುಕಿಸಿಕೊಡು.

ಶ್ರೀರಾಮ—ಹಿರಿಯರೇ ನಾನು ತಾನೆ ಏನು ಮಾಡಬಲ್ಲೆ? ತಪಸ್ವಿಗಳ ಶಾಪಕ್ಕೆ ನಾನೇನು, ದೇವತೆಗಳೇ ಬದಲು ಹೇಳಲಾರರು. ಬೇಕಾದರೆ ನಿಮ್ಮ ಪರವಾಗಿ ನಾನೂ ಇವರನ್ನು ಪ್ರಾರ್ಥಿಸುತ್ತೇನೆ.

ವೃ.ಬ್ರಾ—ಬೇಡ ಬಿಡು ಶ್ರೀರಾಮಚಂದ್ರ! ನೀನೇಕೆ ನನಗಾಗಿ ಅಂಗಲಾಚ ಬೇಕು?

ಶ್ರೀರಾಮ—ವಿಪ್ರವರೇಣ್ಯ ನಿಮ್ಮಂತಹವರನ್ನು ಪಡೆದ ನನ್ನ ರಾಜ್ಯ ಧನ್ಯವಾಯಿತು.

ವೃ.ಬ್ರಾ—ನಾನೊಬ್ಬ ಸಾಧಾರಣ ಪ್ರಜೆ. ಇಂತಹ ಮುನಿವರ್ಯರಿಂದ ನಿನ್ನ ರಾಜ್ಯ ಧನ್ಯವೆಂದು ಹೇಳು. [ತನ್ನ ಕುಮಾರನ ಕಳೇಬರದ ಕಡೆ ದೈನ್ಯ ದಿಂದ ಈಕ್ಷಿಸಿ] ಹುಂ......ಇನ್ನು ಮುಂದಿನ ಕೆಲಸವನ್ನಾದರೂ

ನೋಡೋಣ .. ..ಅರಿಯುದುದನ್ನು ಜಿಜ್ಞಾಸೆಮಾಡಿ ಪ್ರಯೋಜನವಿಲ್ಲ. [ಬಾಲಕನ ಕಡೆ ಮುಂಬರಿಯುತ್ತಾನೆ.]

**ಶ್ರೀರಾಮ**—ಪೂಜ್ಯರೆ ಕೊಂಚ ಇರಿ. ವಿಚಾರವನ್ನಾದರೂ ಸಮಗ್ರವಾಗಿ ತಿಳಿಯೋಣ. [ಮುನಿಯನ್ನುದ್ದೇಶಿಸಿ] ಮುನಿಪುಂಗವರೇ, ನೀವು ಹೇಳುವುದು ನಿಜ, ಬೆಂಕಿಯಲ್ಲಿ ಕೈಯಿಟ್ಟರೆ ಅದು ಸುಡುತ್ತದೆ. ಆದರೆ ಇಷ್ಟಕ್ಕೆಲ್ಲ ಕಾರಣವೇನೆಂಬುದನ್ನು ತಾವಾದರೂ ವಿಶದವಾಗಿ ತಿಳಿಸಿ.

**ಮುನಿ**—ತ್ರೇತಾಯುಗದಲ್ಲಿ ಶೂದ್ರನಿಗೆ ತಪಸ್ಸಿಗೆ ಅಧಿಕಾರವಿಲ್ಲ; ಏಕೆಂದರೆ ಅವರಲ್ಲಿ ಆ ನಿಗ್ರಹಣ ಶಕ್ತಿ ಇಲ್ಲ ಎಂದು ಬ್ರಾಹ್ಮಣರು ಹೇಳುತ್ತಿದ್ದರು. ಅದರಿಂದ, ಅವರ ಆ ಮಾತನ್ನು ಸುಳ್ಳುಮಾಡಬೇಕೆಂದು ನಾನು ನಿಶ್ಚಯಿಸಿದೆ ಶೂದ್ರನಲ್ಲೂ ತಪೋಸಿದ್ಧಿ ಪಡೆಯುವ ಶಕ್ತಿಯಿದೆ ಎಂಬುದನ್ನು ಸಾಕ್ಷೀಭೂತಮಾಡಲು ನಾನು ತಪಸ್ಸಿಗೆ ಕುಳಿತೆ.

**ಶ್ರೀರಾಮ**—ಮುನಿಗಳೇ, ಅದೆಲ್ಲ ಸರಿ. ನನಗೆ ಅವೆಲ್ಲ ಬೇಕಿಲ್ಲ. ತಾವು ಆ ಬಾಲಕನನ್ನು ಶಪಿಸಲು ಅವನು ತಮ್ಮಲ್ಲಿ ಮಾಡಿದ ಅಪಚಾರವೇನೆಂದು ತಿಳಿಸಿ ಉಪಕಾರಮಾಡುವಿರಾ ?

**ಮುನಿ**—ಅದನ್ನೇ ನಾನು ಹೇಳುತ್ತಿರುವುದು. ನಾನು ಹೇಳುವ ಈ ಹಿನ್ನೆಲೆಯನ್ನು ಕೇಳಿದರೆ ನಿನಗೆ ವಿಚಾರ ಜಾಗ್ರತೆ ತಿಳಿಯುವುದೆಂದು ಹೇಳುತ್ತಿದ್ದೇನೆ.

**ಶ್ರೀರಾಮ**—ತಾವು ಹೇಗೆ ಹೇಳಿದರೂ ಸರಿಯೆ ಹೇಳಿ.

**ಮುನಿ**—ನಾನು ತಪಸ್ಸಿಗೆ ಕುಳಿತಿರುವುದು ಈ ಬ್ರಾಹ್ಮಣರಿಗೆ ತಿಳಿದರೆ ನನ್ನ ತಪಸ್ಸಿಗೆ ಅಡ್ಡಿ ಮಾಡುವರೆಂದು ನಾನು ಮೊದಲೇ ಅರಿತಿದ್ದೆ. ಅದರಿಂದಲೇ ಯಾರಿಗೂ ಕಾಣದಿರಲೆಂದು ಮೊದಲೇ ನಾಲ್ಕು ಕಡೆಯೂ ದಟ್ಟವಾದ [ತಾನು ಬಂದ ಕಡೆ ತೋರಿಸಿ] ಈ ಹೂಗಿಡಗಳನ್ನು ಎತ್ತರವಾಗಿ ಬೆಳೆಸಿ ಅನಂತರ ನಾನು ಅವುಗಳ ಮಧ್ಯದಲ್ಲಿ ತಪಸ್ಸಿಗೆ ಕುಳಿತೆ. ಉದ್ದೇಶವಿಲ್ಲದ ವಿನಹ ಯಾರೂ ಈ ಗಿಡಗಳ ಮಧ್ಯ ಪ್ರದೇಶಕ್ಕೆ ಬರಬೇಕಾದ ಕಾರಣವೂ ಇಲ್ಲ; ಬರಲೂಲಾರರು. ಹೌದೋ ಅಲ್ಲವೋ ?

ಶ್ರೀರಾಮ—ಆಗಲಿ ಮುಂದೆ ?

ಮುನಿ—ಹೀಗಿದ್ದರೂ ಸಹ ಹೇಗೆಯೋ ನಾನು ಈ ಮಧ್ಯೆ ಇರುವ ಸುಳು ತಿಳಿದುಕೊಂಡು ಹೂ ಕೀಳುವ ನೆಪದಿಂದ ವಕ್ಕದ ದೊಡ್ಡಮರವ ಸಣ್ಣ ರೆಂಬೆಯನ್ನು ಹತ್ತಿ ಮಧ್ಯಕ್ಕೆ ಬಂದು, ಈ ಬಾಲಕನು ಉದ್ದಿಶ್ಯ ಪೂರ್ವಕವಾಗಿ ನನ್ನಮೇಲೆ ಧುಮಿಕಿ ನನ್ನ ತಪೋಭಂಗ ಮಾಡಿದ್ದಾನೆ. ತಪೋಭಂಗ ಮಾಡಿದುದೇ ಕಾರಣ ಅವನು ನನ್ನ ಶಾಪಗ್ರಸ್ತನಾಗಿ ಮರಣ ಹೊಂದಬೇಕಾಯಿತು. ಇದಕ್ಕೆ ನಾನೇನು ಮಾಡಲಿ ?

ಶ್ರೀರಾಮ—ಅವನು ಉದ್ದಿಶ್ಯಪೂರ್ವಕವಾಗಿ ನಿಮ್ಮ ಮೇಲೆ ಧುಮುಕಿದ ನೆಂದು ಹೇಳಿದಿರಲ್ಲವೆ ?

ಮುನಿ—ಹೌದು

ಶ್ರೀರಾಮ—ಉದ್ದಿಶ್ಯಪೂರ್ವಕವಾಗಿಯೇ ಹಾಗೆಮಾಡಿದನೆಂದು ಹೇಗೆ ಊಹಿ ಸಿದಿರಿ ?

ಮುನಿ—ಅವನು ಆ ಮಧ್ಯೆ ಬಂದು ಯಾರಿಗೂ ಗೋಚರವಾಗದಿರುವ, ಅದೂ ವಲ್ಮೀಕದಿಂದ ಆವೃತನಾದ ನನ್ನ ಮೇಲೆ ಬೀಳಬೇಕಾದರೆ ಉದ್ದಿಶ್ಯವಿದ್ದೇತೀರಬೇಕು.

ಶ್ರೀರಾಮ—[ಸ್ವಗತ] ವಲ್ಮೀಕ ? .. ಆ ಪದವೇಕೋ ನನ್ನ ಮನಸ್ಸಿಗೆ ನೋವನ್ನುಂಟುಮಾಡುತ್ತದೆ....ಹಿಂದೆಯೇ ಆ ನನ್ನ ಶಾಂತದೇವಿ, ಸೀತೆಯನ್ನು ಪಾಲಿಸುತ್ತಿರುವ ಆದಿಕವಿಯ ನೆನಪನ್ನೂ ಮನಸ್ಸಿಗೆ ಮೂಡಿಸುತ್ತಿದೆ. ಆ ಕವಿಯೂ ಈತನಂತೆ ಶೂದ್ರನೆ! ಆತನಿಗಾರಾ ದರೂ ವಿಪ್ರೋತ್ತಮರು ತಪೋಭಂಗ ಮಾಡಿದರೆ ? ಇಲ್ಲವಲ್ಲ. ಆ ಮಹಾ ಕವೀಶ್ವರನನ್ನು ಮಹರ್ಷಿ ಎಂದು ಅವರು ಒಪ್ಪಿಕೊಂಡಿಲ್ಲವೇ ? ಈತನಿಗೇಕೆ ಬ್ರಾಹ್ಮಣರಮೇಲೆ ಇಲ್ಲದ ಕಿಚ್ಚು ? [ಯೋಚನಾ ಮಗ್ನ ನಾಗುವನು].

ಮುನಿ—ಈಗಲಾದರೂ ನಾನು ಹೇಳಿದುದು ಒಪ್ಪಿಗೆಯಾಯಿತೆ ?

ಶ್ರೀರಾಮ—ಆಗಲಿ ಅವನು ನಿಮ್ಮ ಮೇಲೆ ಉದ್ದಿಶ್ಯಪೂರ್ವಕವಾಗಿಯೇ ಬಿದ್ದನೆಂದು ಇಟ್ಟುಕೊಳ್ಳೋಣ, ಅದಕ್ಕಾದರೂ ಒಂದು ಕಾರಣ ಬೇಕಲ್ಲ ?

ಮುನಿ—ಹೌದು ಬೇಕು !

ಶ್ರೀರಾಮ—ಅಂತಹ ಕಾರಣವೇನಿರಬಹುದು ?

ಮುನಿ—ಅದೂ ಊಹೆಗೆ ಮೀರಿದ್ದಲ್ಲ. ನಾನು ಶೂದ್ರ. ತಪಸ್ಸನ್ನು ಸಾಧಿಸಿದರೆ ನನ್ನನ್ನು ಗೌರವಿಸಬೇಕಾಗಬಹುದೆಂಬ ಹೊಟ್ಟೇಕಿಚ್ಚೇ ಕಾರಣ.

ಶ್ರೀರಾಮ—ನಿಮ್ಮ ಈ ಮಾತಿನಲ್ಲಿ ನಂಬಿಕೆ ಇಡುವುದು ಬಹಳ ಕಷ್ಟ. ನೀವು ಮನಸ್ಸಿನಲ್ಲಿ ಊಹಿಸಿದ್ದನ್ನೆಲ್ಲ ನಿಜವೆಂದು ನಂಬಲು ಹೇಗೆ ಸಾಧ್ಯ. ಬ್ರಾಹ್ಮಣರಿಗೆ ನಿಮ್ಮ ಮೇಲೆ ದ್ವೇಷವಿದೆಯೆಂದು ಹೇಳಿದಿರಲ್ಲ ಅದು ನಿಮ್ಮ ಊಹೆಯೇ ಅಥವಾ ಕಣ್ಣೆದುರಿಗೆ ಕಂಡ ಅಥವಾ ಅನುಭವಿಸಿದ ವಿಚಾರವೋ ?

ಮುನಿ—ಬೇರೆ ವಿಚಾರಗಳೇಕೆ ? ಅದಕ್ಕೆ ಇಲ್ಲಿ ನಡೆದಿರುವುದೇ ಸಾಕ್ಷಿ.

ಶ್ರೀರಾಮ—ಹೀಗೂ ಇರಬಹುದಲ್ಲವೇ ? ಬ್ರಾಹ್ಮಣರು ಶೂದ್ರರಿಗೆ ತಪಸ್ಸಿಗೆ ಅಧಿಕಾರವಿಲ್ಲವೆಂದು ಹೇಳುತ್ತಾರೆ. ಕಾರಣ ಶೂದ್ರರಿಗೆ ನಿಗ್ರಹಣ ಶಕ್ತಿಯಿಲ್ಲವೆಂಬುದರ ಅರ್ಥವನ್ನು ಸರಿಯಾಗಿ ತಿಳಿಯದೆ, ಅದಕ್ಕೆ ದ್ವೇಷ, ಹೊಟ್ಟೆಕಿಚ್ಚಿನ ಬಣ್ಣ ಯಾರೋ ಕೊಟ್ಟಿರಬಹುದು. ಆ ಬಣ್ಣ ಕಟ್ಟಿದ್ದನ್ನು ನೆಲೆಯಾಗಿ ಹಿಡಿದು ತಾವು ಹಠದಿಂದ, ಪ್ರತಿಸ್ಪರ್ಧೆಯಿಂದ ತಪಸ್ಸಿಗೆ ಕುಳಿತಾಗ, ಇಲ್ಲದ ಶಂಕೆ ನಿಮ್ಮ ಮನಸ್ಸಿನಲ್ಲಿ ಮೊದಲೇ ಮೂಡಿದ್ದುದರಿಂದ, ಅಚಾತುರ್ಯದಿಂದ ನಡೆದಿರಬಹುದಾದ ಈ ಕೆಲಸಕ್ಕೆ ತಾವು ತಪ್ಪು ಅರ್ಥಮಾಡಿರಬಹುದು. ಅಲ್ಲವೇ ?

ಮುನಿ—ನನಗೆ ಯಾರ ಮಧ್ಯಸ್ಥಿಕೆಯೂ ಬೇಕಿಲ್ಲ. ನಾನು ನೆನೆದಂತೆಯೇ ಅವರು ಮಾಡಿರುತ್ತಾರೆ. ಇನ್ನೊಬ್ಬರು ಮುಂದುವರಿಯುವುದನ್ನು ಸಹಿಸಲಾರದ ಹಾಳು ಪಂಗಡ.

ಶ್ರೀರಾಮ—ಅವಿಚಾರವಾದರೆ ಮನ್ನಿಸಿ. ಬೇರೊಬ್ಬರನ್ನು ನಿಂದಿಸುವುದು ಉತ್ತಮರ ಕೆಲಸವಲ್ಲ. ಪುಣ್ಯ ಗಳಿಸುವುದು ಕಷ್ಟ. ಆದರೆ ಗಳಿಸಿದ್ದನ್ನು ಹಾಳುಮಾಡಿಕೊಳ್ಳುವುದು ಬಹಳ ಸುಲಭ. ನೂರು ಒಳ್ಳೆಯದನ್ನು ಮಾಡಿ ಗಳಿಸಿದ ಪುಣ್ಯ ಒಂದು ಹಾಳುನುಡಿಯಿಂದ ಹಾಳಾಗಿ ಹೋಗುತ್ತದೆ. ಕೆಲವರಿಗೆ ಗಳಿಸುವುದು ಸುಲಭವಾಗಿ ಕಂಡರೂ ಅದನ್ನು ಗಳಿಸುವ ಉದ್ದಿಶ್ಯ ಹುಟ್ಟಿದಮೇಲೆ ಅವರು ಅದನ್ನು ಉಪ

ಯೋಗಿಸುವ ವಿತರಣೆಯನ್ನು ತಿಳಿದಿರಬೇಕು, ತಪಸ್ಸೂ ಅಷ್ಟೆ! ವಿದ್ಯೆಯೂ ಅಷ್ಟೆ! ಸರಸ್ವತಿ ಒಲಿಯಬಹುದು. ಅವಳು ಒಲಿದಳೆಂದು ಆ ಶಕ್ತಿಯನ್ನು ದುರುಪಯೋಗಪಡಿಸಬಾರದು. ಉತ್ತಮವಾದದ್ದನ್ನು ಗಳಿಸಬೇಕೆಂದು ಎಲ್ಲರಿಗೂ ಆಸೆಯಾಗುತ್ತದೆ. ಗಳಿಸಲು ಯಾರೂ ಅಡ್ಡಿಪಡಿಸುವುದಿಲ್ಲ. ಆದರೆ ಗಳಿಸಿದ್ದನ್ನು ಉಳಿಸಿಕೊಳ್ಳುವುದು, ಸರಿಯಾಗಿ ಉಪಯೋಗಿಸಿಕೊಳ್ಳುವುದು ಬಹಳ ಕಷ್ಟ! ಅದರಿಂದ ಗಳಿಸಿ ದುರುಪಯೋಗ ಮಾಡುವುದಕ್ಕಿಂತ ಗಳಿಸದಿರುವುದು ಮೇಲೆಂದು ಹಿರಿಯರು ಹೇಳುತ್ತಾರೆ.

ಮುನಿ—ಹುಚ್ಚು! ಗಳಿಸಿದವನು ಉಳಿಸದೆ ಹೋಗುತ್ತಾನೇನು?

ಶ್ರೀರಾಮ—ಉಳಿಸಿಕೊಂಡವನೇ ಜ್ಞಾನಿ—ಅವನೇ ಮುನಿ—ಅವನೇ ಉತ್ತಮ ಕುಲದವನು—ಅವನೇ ಭೂಸುರೋತ್ತಮ. ಹಾಗೆಯೇ ಅಳಿಸಿಕೊಂಡವನೇ ಅಜ್ಞಾನಿ—ಅಪಾತ್ರ! ಅದರಿಂದಲೇ ನಮ್ಮಲ್ಲಿ ಯಾರಾದರೂ ಯಾವುದಕ್ಕಾದರೂ ಅಪೇಕ್ಷೆಪಟ್ಟರೆ, ಅದನ್ನು ಪಡೆಯಲು ಅವನಲ್ಲಿ ಅರ್ಹತೆ ಇದೆಯೋ ಇಲ್ಲವೋ ಎಂದು ಬಹುಪರಿಯಾಗಿ ಪರೀಕ್ಷಿಸಿದನಂತರವೇ ಅರ್ಹನಾಗಿದ್ದಲ್ಲಿ ಅದನ್ನು ಅವನಿಗೆ ಕೊಡುವುದು.

ಮುನಿ—ಯಾರೇನು ಕೊಡುವುದು? ತೆಗೆದುಕೊಳ್ಳುವ ಶಕ್ತಿ ಇರುವಾಗ?

ಶ್ರೀರಾಮ—ಹಾಗೆ ತೆಗೆದುಕೊಳ್ಳುವ ಶಕ್ತಿ ಇದ್ದು ತೆಗೆದುಕೊಂಡರೂ, ಉಳಿಸಿಕೊಳ್ಳುವ ಶಕ್ತಿ ಇದ್ದರೆ ಉಳಿಯುತ್ತದೆ. ಗಳಿಸಿದರೂ ಪರೀಕ್ಷೆಗೊಳಗಾಗದೆ ಯಾರೂ ಉಳಿಸಿಕೊಳ್ಳಲಾರರು.

ವೃ.ಬ್ರಾ—ದೇವ! ಅವರ ನಿರ್ಮಲ ಮನಸ್ಸಿಗೆ ಎಲ್ಲವನ್ನೂ ಒಪ್ಪಿಸಿಬಿಡೋಣ. ಅವರಿಷ್ಟದಂತೆಯೇ ನಡೆಯಲಿ.

ಶ್ರೀರಾಮ—ಮುನಿಗಳೇ, ನಿಮಗೆ ಅವರಮೇಲೆ ಉಂಟಾಗಿರುವ ದ್ವೇಷಕ್ಕೆ ಬುಡವಿಲ್ಲವೆಂದು ನಾನು ಖಂಡಿತ ಹೇಳಬಲ್ಲೆ.

ಮುನಿ—ಹೇಗೆ?

ಶ್ರೀರಾಮ—ಉದ್ದಿಶ್ಯಪೂರ್ವಕವಾಗಿ ನಿಮ್ಮ ಮೇಲೆ ಧುಮುಕಿ ತಪೋಭಂಗ ಮಾಡಿದರೆಂದು ಹೇಳಿದಿರಲ್ಲ ಅದರಿಂದಲೇ ಅವರಿಗೆ ನಿಮ್ಮ ತಪೋಭಂಗಮಾಡುವ ಉದ್ದಿಶ್ಯವಿಲ್ಲವೆಂದು ನಾನು ಹೇಳಬಲ್ಲೆ.

**ಮುನಿ**—ಇದೀಗ ಚೆನ್ನಾಗಿದೆ! ನಾನು ಹೇಳಿದ ಕಾರಣಗಳೇ ನಿಮಗೆ ಸಾಕ್ಷಿಯೇ? ಅದು ಹೇಗೆ ಸಾಧ್ಯ?

**ಶ್ರೀರಾಮ**—ಮೊದಲನೆಯದು ನೀವು ಕಾಣದಂತೆ ಗಿಡಗಳ ಮಧ್ಯದಲ್ಲಿದ್ದುದು. ಎರಡನೆಯದು ನೀವು ವಲ್ಮೀಕದಿಂದ ಆವರಿಸಲ್ಪಟ್ಟುದು. ಮೂರನೆಯದು ಆ ಬಾಲಕ ನಿಮ್ಮ ಮೇಲೆ ಧುಮುಕಿದನೆಂದು ಹೇಳಿದುದು.

**ಮುನಿ**—ನಾನು ಹೇಳಿದುದೇ ಹೇಳಿದರೆ ನನಗೆ ಉತ್ತರ ಹೇಳಿದ ಹಾಗಾಯಿತೆ?

**ಶ್ರೀರಾಮ**—ಅದೇ ಉತ್ತರ. ಕೆಳಗಿದ್ದಾಗ ಕಣ್ಣಿಗೆ ಕಾಣದಿದ್ದ ನೀವು ಗಿಡ ಹತ್ತಿದಾಗ ಕಂಡಿರಬಹುದು. ಆದರೆ ನೀವು ವಲ್ಮೀಕದಿಂದ ಆವರಿಸಿದ್ದಾಗ ಅದರೊಳಗೆ ನೀವೇ ಇದ್ದೀರೆಂದು ತಿಳಿಯುವ ಬಗೆ ಹೇಗೆ? ಯಾರಾದರೂ ಕಂಡೂ ಕಂಡೂ ಹಾವಿನ ಹುತ್ತದ ಮೇಲೆ ಧುಮುಕುತ್ತಾರೆಯೆ? ನೀವು ಇಲ್ಲಿ ತಪಸ್ಸು ಮಾಡುವುದು ಗೊತ್ತಿದ್ದು, ನಿಮ್ಮ ಮೇಲೆ ವಲ್ಮೀಕ ಬೆಳೆದಿದ್ದುದು ಗೊತ್ತಿದ್ದು ನಿಮ್ಮ ತಪೋಭಂಗ ಮಾಡಬೇಕೆಂದು ಇಷ್ಟವಿದ್ದಿದ್ದರೆ ನಿಮ್ಮ ಮೇಲೆ ಧುಮುಕುವುದೊಂದೇ ಮಾರ್ಗವೇ? ಸಂದರ್ಭಗಳನ್ನು ನೋಡಿದರೆ ಬಾಲಕನು ಹೂ ಕೀಳಲು ಕೊಂಬೆ ಹತ್ತಿದಾಗ ಕಾಲು ಜಾರಿ ಬಿದ್ದಿರಬಹುದು. ಅಷ್ಟಕ್ಕೆ ಅವನನ್ನು ಶಿಕ್ಷಿಸುವುದು ಸರ್ವಥಾ ಸರಿಯಿಲ್ಲ.

**ಮುನಿ**—ನಿಮ್ಮ ಮಾತುಗಳನ್ನು ಸಾಧಿಸಿಕೊಳ್ಳುವುದಕ್ಕೆ ನೀವುಗಳು ಹೀಗೆಲ್ಲ ಹೇಳಬಹುದು. ನಾನಿದನ್ನು ಒಪ್ಪಲಾರೆ.

**ಶ್ರೀರಾಮ**—ಹಾಗಾದರೆ ಏನು ಮಾಡಲು ಸಾಧ್ಯ! ನಡೆದದ್ದೇನೆಂದು ನಾನು ನೋಡಲಿಲ್ಲ. ಇವರು ನೋಡಲಿಲ್ಲ. ತಾವೂ ಕಾಣಿರಿ! ಏನೆಂಬುದು ಸರಿಯಾಗಿ ಗೊತ್ತಿದ್ದರೆ ಆ ಬಾಲಕನೊಬ್ಬನಿಗೆ ಗೊತ್ತಿರಬೇಕು ಅವನೀಗ ಏನೂ ಹೇಳಲಾರ.

**ಮುನಿ**—ಅವನು ಹೇಳುತ್ತಿದ್ದುದಾದರೂ ಏನು? ತನ್ನ ಮೂಗಿನ ನೇರಕ್ಕೆ ತನ್ನ ತಲೆಯ ಮೇಲೆ ತಪ್ಪಿನ ಹೊರೆ ಬೀಳವಂತೆ ಹೇಳಿಕೊಳ್ಳುತ್ತಿದ್ದ. ಆದರಿಂದ ಅವನ ಮಾತನ್ನು ನಂಬಲು ಸಾಧ್ಯವಿಲ್ಲ.

**ಶ್ರೀರಾಮ**—ಹಾಗಾದರೆ ಈಗೇನು ಮಾಡಬೇಕು?

**ಮುನಿ**—ಏನಾದರೂ ಮಾಡಬೇಕೇಕೆ? ನಾನು ನನ್ನ ತಪಸ್ಸನ್ನು ಮುಂದು

ವರಿಸುತ್ತೇನೆ. ಆತನಾ ಕಳೇಬರವನ್ನೊಯ್ದು ಅಂತ್ಯಕಾರ್ಯವೆಸಗಲಿ. ನೀನು ರಾಜಧಾನಿಗೆ ಮರಳಿ ರಾಜ್ಯಭಾರ ನಡೆಸು.

ವೃ.ಬ್ರಾ—ನಮ್ಮ ಪ್ರಾರಬ್ಧಕ್ಕೆ ಯಾರೇನು ಮಾಡಲು ಸಾಧ್ಯ.

**ಶ್ರೀರಾಮ**—ಮುನಿಗಳೇ, ಇದರ ನಿಜಾಂಶವೇನೆಂದು ಹೊರಬೀಳಲೇಬೇಕು.

**ಮುನಿ**—ಹಾಗಾದರೆ ನಾನು ಹೇಳಿದ್ದು ನಿಜವಲ್ಲವೆ ?

**ಶ್ರೀರಾಮ**—ನೀವು ಹೇಳಿದ್ದು ನಿಜವಾದಲ್ಲಿ – ಬಾಲಕನು ನಿಜವಾಗಿ ತಪ್ಪು ಮಾಡಿರಬೇಕು. ಅಲ್ಲವೇ ?

**ಮುನಿ**—ಹೌದು !

**ಶ್ರೀರಾಮ**—ಅಂದಮೇಲೆ ತಾವು ಅವನಿಗೆ ವಿಧಿಸಿದ ಶಿಕ್ಷೆ ನ್ಯಾಯ ?

**ಮುನಿ**—ಯಾರಲ್ಲವೆಂದು ಹೇಳುತ್ತಾರೆ ?

**ಶ್ರೀರಾಮ**—ಸರಿ. ನೀವು ಅವನಿಗೆ ವಿಧಿಸಿದ ಶಿಕ್ಷೆಗೆ ನಿಮ್ಮ ತಪಃಶಕ್ತಿಯನ್ನು ಉಪಯೋಗಿಸಿದಿರಲ್ಲವೇ ?

**ಮುನಿ**—ಹೌದು.

**ಶ್ರೀರಾಮ**—ತಪಸ್ಸನ್ನು ಗಳಿಸುವುದು ಏತಕ್ಕೆ?

**ಮುನಿ**—ಆತ್ಮೋದ್ಧಾರಕ್ಕೆ?

**ಶ್ರೀರಾಮ**—ಲೋಕಕಲ್ಯಾಣಕ್ಕಲ್ಲವೆ ?

**ಮುನಿ**—ಅಲ್ಲವೆಂದವರಾರು? ಅದಕ್ಕೂ ಹೌದು !

**ಶ್ರೀರಾಮ**—ಹಾಗಾದರೆ ಮರಣದಂಡನೆ ವಿಧಿಸಲು ತಪಸ್ಸು ಉಪಯೋಗಿಸುವುದು ನಿಮ್ಮ ದೃಷ್ಟಿಯಲ್ಲಿ ಲೋಕಕಲ್ಯಾಣವೆ ?

**ಮುನಿ**—ವೃಥಾ, ಅಕಾರಣವಾಗಿ, ಅನ್ಯಾಯವಾಗಿ, ತಪ್ಪಿಲ್ಲದೆ ಮರಣದಂಡನೆ ವಿಧಿಸಿದರೆ ಅದು ತಪ್ಪು. ಆದರೆ ತಪ್ಪಿಗೆ ಶಿಕ್ಷೆ ಕೊಟ್ಟರೆ ಅದು ಲೋಕಕಲ್ಯಾಣವೇ ನಿಜ !

**ಶ್ರೀರಾಮ**—ಒಪ್ಪಿದೆ. ತಪ್ಪಿದ್ದು ಶಿಕ್ಷೆ ವಿಧಿಸಿದರೆ ಯಾರೂ ತಪ್ಪೆನ್ನುವುದಿಲ್ಲ. ತಪ್ಪಿಗೆ ಶಿಕ್ಷೆ ವಿಧಿಸುವುದೂ ಲೋಕಕಲ್ಯಾಣದ ಒಂದು ಅಂಗ. ಆದರೆ ಈಗ ಕೊಟ್ಟಿರುವ ಶಿಕ್ಷೆ ನ್ಯಾಯಸಮ್ಮತವಾದದ್ದೇ ಇಲ್ಲವೇ ಎಂದು ನಿಶ್ಚಯಿಸುವುದರಲ್ಲಿ ತಪ್ಪೇನಾದರೂ ಇದೆಯೆ ?

**ಮುನಿ**—ನಿಶ್ಚಯಿಸಬೇಕಾದ ಅವಶ್ಯಕತೆಯೇ ಇಲ್ಲ. ನಿಮಗಿನ್ನೂ ಅನುಮಾನವಿದ್ದರೆ ತೋರಿದಂತೆ ನಿಶ್ಚಯಕ್ಕೆ ಬರಬಹುದು.

**ಶ್ರೀರಾಮ**—ತಾವು ಹಿರಿಯರು, ತಮ್ಮಲ್ಲಿ ಈ ರೀತಿ ನಾನು ಪ್ರಶ್ನೆ ಮಾಡಬಾರದು. ಆದರೂ ಈಗ ನ್ಯಾಯದ ಪ್ರಶ್ನೆ ಬಂದಿರುವುದರಿಂದ ಪ್ರಶ್ನೆ ಮಾಡಬೇಕಾಗಿದೆ. ಆದುದರಿಂದ ತಾವು, ಅನ್ಯಥಾಭಾವಿಸದೆ ನಾನು ಕೇಳಿದ್ದಕ್ಕೆ ಉತ್ತರ ಹೇಳಿ ಉಪಕಾರ ಮಾಡಬೇಕು.

**ಮುನಿ**—ಅಗತ್ಯವಾಗಿ ಆಗಬಹುದು.

**ಶ್ರೀರಾಮ**—ತಪಸ್ಸಿದ್ಧಿ ಪಡೆದಮೇಲೆಂದಾದರೂ ಅದರ ಶಕ್ತಿ ಅಳಿಯುತ್ತದೆಯೇ?

**ಮುನಿ**—ಅಳಿಯದೆ ಏನು? ಅದನ್ನು ದುರುಪಯೋಗ ಪಡಿಸಿದರೆ ಅಳಿಯುತ್ತದೆ.

**ಶ್ರೀರಾಮ**—ಅದು ಉಳಿಯಬೇಕಾದರೆ? ಗಳಿಸಿದ್ದಕ್ಕೆ ಸಾರ್ಥಕವಾಗಬೇಕಾದರೆ?

**ಮುನಿ**—ತಪಃಶಕ್ತಿಯನ್ನು ಉಪಯೋಗಿಸಿದರೆ, ಅದು ಒಳ್ಳೆಯದಕ್ಕೇ ಆಗಲಿ, ಕೆಟ್ಟದ್ದಕ್ಕೇ ಆಗಲಿ ಕಡಿಮೆಯಾಗುತ್ತದೆ. ಆದರೆ ಒಳ್ಳೆಯದಕ್ಕೆ ಉಪಯೋಗಿಸಿದರೆ ಗಳಿಸಿದ್ದಕ್ಕೆ ಸಾರ್ಥಕವಾಗುತ್ತದೆ. ಕೆಟ್ಟದ್ದಕ್ಕೆ ಉಪಯೋಗಿಸಿದರೆ ತಪಃಶಕ್ತಿ ಸಂಪೂರ್ಣ ನಾಶವಾಗುತ್ತದೆ.

**ಶ್ರೀರಾಮ**—ನಿಮ್ಮ ಮನಸಾ ಒಪ್ಪಿ ಈ ಮಾತನ್ನು ಹೇಳುತ್ತಿರುವಿರಾ?

**ಮುನಿ**—ಮನಸ್ಸೊಪ್ಪದ ಮಾತನ್ನು ಯಾರೂ ಆಡರು.

**ಶ್ರೀರಾಮ**—ಒಳ್ಳೆಯ ಕೆಲಸಕ್ಕೆ ತಪಃಶಕ್ತಿಯನ್ನು ಉಪಯೋಗಿಸಿದರೆ ತಪಃಶಕ್ತಿ ಕಡಿಮೆ ಆಗುತ್ತದೆಯೆಂದು ಹೇಳಿದಿರಲ್ಲಾ!

**ಮುನಿ**—ಕೆಟ್ಟದ್ದಕ್ಕೆ ವಿನಿಯೋಗಿಸಿದರೆ ಗಳಿಸಿದ್ದೆಲ್ಲಾ ನಾಶ! ಅದು ಸದುಪಯೋಗವಾಗಿದ್ದರೆ ಉಳಿದಿರುತ್ತದೆ, ವರ್ಧಿಸಿಕೊಳ್ಳಬಹುದು.

**ಶ್ರೀರಾಮ**—ಸರಿ. ಹಾಗಾದರೆ ಈಗ ನೀವು ನಿಮ್ಮ ತಪಸ್ಸನ್ನು ಈ ಬಾಲಕನನ್ನು ಶಪಿಸಲು ಉಪಯೋಗಿಸಿರುವಿರಲ್ಲ ಇದು ಸದುಪಯೋಗವಲ್ಲವೆ?

**ಮುನಿ**—ಅಡ್ಡಿಯಿಲ್ಲದೆ.

**ಶ್ರೀರಾಮ**—ಹಾಗಾದರೆ ನಿಮ್ಮಲ್ಲಿ ಇನ್ನೂ ತಪಃಶಕ್ತಿ ಉಳಿದಿದೆ ಎಂದಂತಾಯಿತು.

**ಮುನಿ**—ಇದೀಗ ವಿಚಿತ್ರವಾದ ಮಾತು.

**ಶ್ರೀರಾಮ**—ಒಂದು ಸಮಯ ನಿಮ್ಮಲ್ಲಿ ಈಗ ತಪಃಶಕ್ತಿ ಉಳಿದಿಲ್ಲದಿದ್ದರೆ ನೀವು ಅದನ್ನು ದುರುಪಯೋಗಪಡಿಸಿದ್ದೀರಿ ಎಂದು ಒಪ್ಪುವಿರಲ್ಲವೇ?

**ಮುನಿ**—ಧಾರಾಳವಾಗಿ ಒಪ್ಪುತ್ತೇನೆ.

**ಶ್ರೀರಾಮ**—ಒಂದು ಸಮಯ ಈಗ ನೀವು ಪರೀಕ್ಷೆಗೆ ಒಳಗಾಗಿ ನೀವು ಅಕಸ್ಮಾತ್ ನಿಮ್ಮ ತಪಸ್ಸನ್ನು ದುರುಪಯೋಗಪಡಿಸಿದ್ದೀರೆಂದು ನಿಶ್ಚಯಿತವಾದರೆ ಈ ಬಾಲಕನದೇನು ತಪ್ಪಿಲ್ಲವೆಂದು ಸಹ ಒಪ್ಪಿಕೊಳ್ಳುವುದು ಸಹಜವಲ್ಲವೆ ?

**ಮುನಿ**—ಸಹಜವೇ ! ಹಾಗೆಯೇ ಅದು ಸದುಪಯೋಗವೆಂದು ಕಂಡುಬಂದರೆ ಆ ಹುಡುಗನದೇ ತಪ್ಪೆಂದು ಸಹ ಒಪ್ಪಿಕೊಳ್ಳಬೇಕಾಗುತ್ತದೆ.

**ಶ್ರೀರಾಮ**—ಅಡ್ಡಿಯಿಲ್ಲದೆ. ನಿಮ್ಮ ತಪಃಶಕ್ತಿಯನ್ನು ನಾನು ಪರೀಕ್ಷೆ ಮಾಡಿದರೆ ನೀವು ತಪ್ಪು ಭಾವಿಸುವುದಿಲ್ಲತಾನೆ.

**ಮುನಿ**—ಪರೀಕ್ಷಿಸು ಅದಕ್ಕೇನಂತೆ. ಬೇಕಾದರೆ ಪರೀಕ್ಷೆಗೆ ನಾನೇ ಒಂದು ಸುಲಭೋಪಾಯವನ್ನು ಹೇಳುತ್ತೇನೆ ನೀನೊಪ್ಪಿದರೆ.

**ಶ್ರೀರಾಮ**—ಅಗತ್ಯವಾಗಿ ತಿಳಿಸಿ.

**ಮುನಿ**—ನಿನ್ನ ಬ್ರಹ್ಮಾಸ್ತ್ರಕ್ಕೆ ಧರ್ಮಾಧರ್ಮ ವಿವೇಚನೆ ಇದೆ. ಅದನ್ನು ಬಿಡು. ಅದು ಯಾರ ಹೃದಯದಲ್ಲಿ ಹೋಗಿ ನೆಡುತ್ತದೆಯೋ ಅವರು ಅಧರ್ಮಿಗಳೆಂದು, ತಪ್ಪಿತಸ್ಥರೆಂದು ತಿಳಿಯುತ್ತದೆ.

**ಶ್ರೀರಾಮ**—ಇಷ್ಟು ಸಣ್ಣ ಕೆಲಸಕ್ಕೆಲ್ಲ ಬ್ರಹ್ಮಾಸ್ತ್ರದಂತಹ ಪವಿತ್ರವಾದ ಅಸ್ತ್ರವನ್ನು ನಾನು ಪ್ರಯೋಗಿಸುವುದೂ ಸಹ ದುರುಪಯೋಗವೇ ! ಅದರಿಂದ ಆ ವಿಚಾರ ಬಿಡಿ. ನಾನೊಂದು ಹೇಳುತ್ತೇನೆ. ನಿಮಗೊಪ್ಪಿಗೆಯಾದರೆ ಅದರಂತೆ ನಡೆಯಬಹುದು.

**ಮುನಿ**—ಹಾಗೆಯೇ ಆಗಲಿ.

**ಶ್ರೀರಾಮ**—ಈ ಬಾಲಕನನ್ನು ನಿಮ್ಮ ತಪಃಪ್ರಭಾವದಿಂದ ಬದುಕಿಸಿ.

**ಮುನಿ**—[ನಕ್ಕು] ಬದುಕಿಸಲೇ ...ಬದುಕಿಸಲೇ ... [ಅನುಮಾನಿಸುವನು]

**ಶ್ರೀರಾಮ**—ಅನುಮಾನವೇಕೆ ? ನಿಮ್ಮ ತಪಃಪ್ರಭಾವದಿಂದ ಅವನು ಬದುಕಿದರೆ ನೀವು ಅವನಿಗೆ ಈಗ ವಿಧಿಸಿರುವ ಶಿಕ್ಷೆ ಸಾಧುವಾದುದು, ಅದರಿಂದ ಆ ಬಾಲಕನದೇ ತಪ್ಪೆಂದು ನಿಶ್ಚಯಿಸಿದಂತಾಯಿತು. ಅವನದೇ ತಪ್ಪೆಂದು ಸಿದ್ಧಾಂತವಾದಮೇಲೆ ನೀವು ಬೇಕಾದರೆ ಪುನಃ ಅದೇ ಶಿಕ್ಷೆಯನ್ನು ವಿಧಿಸಬಹುದು. ಅದೆಲ್ಲ ನಿಮ್ಮ ಕೈಯಲ್ಲೇ ಇದೆ.

ಮುನಿ—ಸರಿ. ಎರಡೂ ನನ್ನ ಕೈಯಲ್ಲೇ ಇರುವಾಗ ಅನುಮಾನವೇಕೆ? [ಕಣ್ಮುಚ್ಚಿ ಒಂದು ಕ್ಷಣ ಧ್ಯಾನಾಸಕ್ತನಾಗಿದ್ದು, ದೀರ್ಘವಾಗಿ ಶ್ವಾಸವೆಳೆದು ಕೊಂಡು, ಕಣ್ಬಿಟ್ಟು ಊರ್ಧ್ವಮುಖಿಯಾಗಿ] ಜೀವಂತನಾಗು ಮಗು! ಜೀವಂತನಾಗು!! [ಎಲ್ಲೆಡೆಯೂ ನಿಶ್ಶಬ್ದ. ಗಭೀರತೆ. ಬಾಲಕನೆಡೆ ತಿರುಗಿ ಒಂದು ಕ್ಷಣ ನೋಡಿ ಅವನು ಏಳದಿರಲು ಮುಂದೆ ಕೈಚಾಚಿ, ಗಟ್ಟಿಯಾಗಿ] ಜೀವಂತನಾಗು ಮಗು! ಜೀವಂತನಾಗು!! [ಆಗಲೂ ನಿಶ್ಶಬ್ದ. ಕೆಳಗೆ ಕುಳಿತು ಬಾಲಕನ ಮೈಸವರಿ ವೃದ್ಧ ಬ್ರಾಹ್ಮಣನನ್ನೊಮ್ಮೆ, ಶ್ರೀರಾಮಚಂದ್ರನನ್ನೊಮ್ಮೆ ನೋಡಿ, ಮತ್ತೆ ಮೇಲೆ ನೋಡಿ, ಒಂದು ಕ್ಷಣ ಕಣ್ಮುಚ್ಚಿ, ಕಣ್ಬಿಟ್ಟು ಎರಡು ಹಸ್ತಗಳನ್ನೂ ಮೇಲೆತ್ತಿ] ದೇವ, ನನ್ನಲ್ಲಿ ತಪಃಶಕ್ತಿ ಏನಾದರೂ ಉಳಿದಿದ್ದರೆ ಈ ಬಾಲಕನು ಈ ಕೂಡಲೇ ಜೀವಂತನಾಗುವಂತೆ ಕರುಣಿಸು. [ಆಗಲೂ ನಿಶ್ಶಬ್ದ. ಕ್ಷಣಕಾಲ ಎಲ್ಲರೂ ಮೌನ. ಬಾಲಕನು ಬದುಕದಿರಲು ಮುನಿಯು ನಿಧಾನವಾಗಿ ಮುಖ ತಗ್ಗಿಸುವನು ಕೊಂಚಹೊತ್ತು ಹಾಗೆಯೇ ಇದ್ದು, ಹಠಾತ್ತಾಗಿ ತಲೆಯೆತ್ತಿ ಶ್ರೀರಾಮಚಂದ್ರನ ಮುಖಾರವಿಂದವನ್ನು ನೋಡಿ, ಎದ್ದೋಡಿ ಬಂದು ಶ್ರೀರಾಮಚಂದ್ರನ ಕಾಲಿಗೆರಗಿ ಹನಿಗಣ್ಣಾಗಿ] ದೇವ, ಸರಿಯಾದ ಸಮಯದಲ್ಲಿ ಬಂದು ಎಚ್ಚರಿಸಿದೆ. ನನ್ನದೇ ತಪ್ಪು! ಕ್ಷಮಿಸು. ಈ ಬಾಲಕನದೇನು ತಪ್ಪಿಲ್ಲ. ನೀನು ಹೇಳಿದುದೇ ಸರಿ. ಸುಮ್ಮನೆ ಮನಸ್ಸಿನಲ್ಲಿ ಮೂಡಿದ, ಅರ್ಥವಿಲ್ಲದ ಶಂಕೆಯೇ ಇಷ್ಟೊಂದನರ್ಥಕ್ಕೆ ಕಾರಣವಾಯಿತು. ಈ ವೃದ್ಧ ಆರ್ಯನ ಕುಮಾರನನ್ನು ನೀನು ಬದುಕಿಸಿಕೊಡು. ಅದಕ್ಕೆ ನಾನೇನು ಬೇಕಾದರೂ ಮಾಡುತ್ತೇನೆ. ಬಲಿಯಾಗುವುದಕ್ಕೂ ಸಿದ್ಧ! ಆಗ ನೀನು ಹೇಳಿದಾಗ ನಿನ್ನ ಮಾತು ರುಚಿಸಲಿಲ್ಲ. ಈಗ ಗೊತ್ತಾಯಿತು. ಉಳಿಸಿಕೊಳ್ಳುವುದು ಕಷ್ಟ! ಉಳಿಸಿಕೊಳ್ಳಲು ಸಾಗದಿದ್ದವರು ಗಳಿಸಲು ಅಯೋಗ್ಯರೆಂದು. ನಿಜ! ಸ್ಪರ್ಧೆಯ ಮೇಲೆ ಉತ್ತಮಪ್ರಾಪ್ತಿ ಪಡೆಯಲು ಸಾಧ್ಯವಿಲ್ಲ. ಏನನ್ನು ಯಾವ ಉದ್ದೇಶದಿಂದ ಹೇಳಿದರೆಂದು ತಿಳಿದುಕೊಳ್ಳದೆ ಏನೋ ಅನುಮಾನದಿಂದ ಒಬ್ಬರನ್ನು ದ್ವೇಷ ಮಾಡಿದರೆ ಅದರ ಫಲವನ್ನು ನಾವೇ ಉಪಭೋಗಿಸಬೇಕಾಗುತ್ತದೆ. ದೇವ, ಆ ವಿಚಾರಗಳಿರಲಿ, ಮೊದಲು ಆ ಬಾಲಕನನ್ನು ಬದುಕಿಸಿಕೊಡು.

**ಶ್ರೀರಾಮ**—ಏಳು ಮಗು, ನಿಮ್ಮ ತಂದೆ ಬಹಳ ಹೊತ್ತಿನಿಂದ ನಿನಗಾಗಿ ಕಾದಿದ್ದಾರೆ. ದೇವತಾರ್ಚನೆಗೆ ವೇಳೆಯಾಯಿತಂತೆ.

[ಬಾಲಕನು ಹೊರಳಿ ಕಣ್ಣುಜ್ಜಿಕೊಳ್ಳುತ್ತಾ ಎದ್ದು ಕುಳಿತು ಮಂಕು ಹಿಡಿದವನಂತೆ ಸುತ್ತಲೂ ನೋಡುತ್ತಾನೆ. ದೇವಾಂಶ ಸಂಭೂತ ಶ್ರೀರಾಮ ಚಂದ್ರನೊಂದು ಕಡೆ, ಜಟಾಧಾರಿ ಮುನೀಶ್ವರನಿನ್ನೊಂದು ಕಡೆ ನಿಂತಿದ್ದಾರೆ. ವೃದ್ಧಬ್ರಾಹ್ಮಣನು ದೂರ ದಿಙ್ಮೂಢನಾಗಿ ನಿಂತಿದ್ದರೂ ಬಾಲಕನು ಎದ್ದನಲ್ಲಾ ಎಂಬ ಹರ್ಷದ ಸುಳಿವು ಅವನ ಮುಖದಲ್ಲಿ ಕಾಣುತ್ತಿದೆ. ಬಾಲಕನೆದ್ದು ತಂದೆಯ ಬಳಿಗೆ ಓಡಿ ಬಂದು]

**ಬಾಲಕ**—ನೀನು ಬೇಡವೆಂದರೂ ಆ ಮರ ಹತ್ತಿದೆ. ಅದಕ್ಕೆ ಜಾರಿ ಬಿದ್ದೆ.

**ವೃ.ಬ್ರಾ**—[ಬಾಲಕನನ್ನು ಅಪ್ಪಿ] ಎಚ್ಚೆತ್ತೆಯಲ್ಲಾ! ನನ್ನ ಕಣ್ಮಣಿ.

**ಬಾಲಕ**—ಇವರಾರಪ್ಪ? ನಾನು ಗಿಡದಮೇಲಿದ್ದಾಗ ಇವರಾರು ಇರಲಿಲ್ಲವಲ್ಲ?

**ವೃ.ಬ್ರಾ**—[ಶ್ರೀರಾಮಚಂದ್ರಮೂರ್ತಿಯನ್ನು ತೋರಿಸಿ] ಜಾನಕೀಪತಿ ಶ್ರೀರಾಮ ಚಂದ್ರ! ನಮ್ಮೆಲ್ಲರ ರಾಜನೀತ. ಇಂದು ನೀನು ಎಚ್ಚೆತ್ತದ್ದು ಈ ದೇವನ ಕೃಪೆಯಿಂದ. ಅವನ ಕಾಲಿಗೆರಗು. [ಬಾಲಕನೆರಗುತ್ತಾನೆ]

**ವೃ.ಬ್ರಾ**—ನಾವು ಊಹಿಸಿರಲಿಲ್ಲವೇ ಈ ಸ್ಥಳದಲ್ಲಿ ಯಾರೋ ಮಹಾತ್ಮರು ತಪಸ್ಸನ್ನಾಚರಿಸುತ್ತಿರಬೇಕೆಂದು, ಅವರೇ ಇವರು.

**ಬಾಲಕ**—ಏನು? ಅವರೇ? ತಮ್ಮ ತಪಃಪ್ರಭಾವದಿಂದ ಗೊಂಡಾರಣ್ಯ ವನ್ನು ಉದ್ಯಾನವನ್ನಾಗಿಸಿದ್ದ ಮಹಾತ್ಮರು ಇವರೇ!

**ವೃ.ಬ್ರಾ**—ಹೌದು ಮಗು! ಇವರೇ!

**ಬಾಲಕ**—ಧನ್ಯ! ನಾನೇ ಧನ್ಯ. ತಂದೆಯೇ ಇದಕ್ಕಿಂತ ಹೆಚ್ಚಿನ ದೇವ ತಾರ್ಚನೆ ಯಾವುದು [ಎಂದು ಅಲ್ಲಿದ್ದ ಹೂ ಬುಟ್ಟಿಯಲ್ಲಿದ್ದ ಹೂಗಳನ್ನು ಬೊಗಸೆಯಲ್ಲಿ ತುಂಬಿಕೊಂಡು ಶ್ರೀರಾಮಚಂದ್ರನಮೇಲೂ, ಶೂದ್ರಮುನಿಯ ಮೇಲೂ ಬುಟ್ಟಿ ಬರಿದಾಗುವರೆಗೂ ಎರಚಿ ಇಬ್ಬರಿಗೂ ದೀರ್ಘದಂಡ ಪ್ರಣಾಮ ಮಾಡುವನು.]

**ಮುನಿ**—[ಕಣ್ಣೀರನ್ನು ತಡೆಯಲಾರದೆ ಕೋಡಿ ಹರಿಯಿಸುತ್ತಾ] ಶ್ರೀರಾಮಚಂದ್ರ! ಇಂದಿನಿಂದ ಈ ಪ್ರಪಂಚಕ್ಕೆ ಶೂದ್ರಮುನಿ ಅಳಿದ. ಉಳಿದನೆಂದಿನ ಶಂಭೂಕ. ಕ್ಷಮೆಯೂ ಒಂದು ಮಹಾ ತಪಸ್ಸೆಂದು – ಸಿದ್ಧಿಯೆಂದೂ ನಾನು ತಪಸ್ಸಿಗೆ ಅನರ್ಹನೆಂದೂ ಗೊತ್ತಾಯಿತು.

**ಶ್ರೀ**   ನೀವು ಅನರ್ಹರೆಂದು ಯಾರು ಹೇಳಿದರು? ಅರಿಷಡ್ವರ್ಗಗಳನ್ನು ಜಯಿಸಲಾರದವನು ಅನರ್ಹನೆಂದು ಹೇಳಿದ್ದಾರೆ. ಶೂದ್ರನೆಂದರೆ ಅವನು. ವಾಲ್ಮೀಕಿ ಮಹರ್ಷಿಗಳು ಯಾವ ಜಾತಿಯಲ್ಲಿ ಜನಿಸಿದರು? ಇಂದು ಅವರು ಮಹರ್ಷಿಗಳಾಗಿಲ್ಲವೆ? ನೀವು ಹೇಳಿದಂತೆ ಬ್ರಾಹ್ಮಣರಿಗೆ ಶೂದ್ರರ ಮೇಲೆ ದ್ವೇಷವಿದ್ದಿದ್ದರೆ ಅವರು ಮಹರ್ಷಿಗಳಾಗುತ್ತಿದ್ದರೆ? ವಸಿಷ್ಠ ಮಹರ್ಷಿಗಳು ಅಂತ್ಯಜ ಕನ್ಯೆಯನ್ನು ಲಗ್ನವಾಗಲಿಲ್ಲವೆ? ಬ್ರಾಹ್ಮಣರಿಗೆ ದ್ವೇಷವಿದ್ದರೆ ಇದೆಲ್ಲ ನಡೆಯುತ್ತಿರಲಿಲ್ಲ. ನಿಜವಾಗಿ ಅವರಿಗೆ ಯಾರಮೇಲೂ ದ್ವೇಷವಿಲ್ಲ.

**ಶಂಭೂಕ**—[ಶಿರಬಾಗಿ] ನಿಜ. ಅವರಿಗೆ ದ್ವೇಷವಿಲ್ಲ ಇನ್ನು ನನಗೆ ಈ ಪ್ರತಿಸ್ಪರ್ಧೆಯಿಂದ ಕೂಡಿದ ತಪಸ್ಸು ಬೇಕಿಲ್ಲ. ಅನ್ಯಾಯವಾಗಿ ತಾವು ಸಣ್ಣವರಾದರೂ, ತಮ್ಮಲ್ಲಿ ಸಣ್ಣತನವೇ ತುಂಬಿದ್ದರೂ, ತಮ್ಮ ಹಿರಿಮೆಯನ್ನು ಹೆಚ್ಚಿಸಿಕೊಳ್ಳಲು ತಿಳಿವಳಿಕೆ ಸಾಲದ ತಮ್ಮವರಲ್ಲಿ ಈ ಬಗೆಯ ವಿದ್ವೇಷವನ್ನು ಹುಟ್ಟಿಸಿ ನಮ್ಮನ್ನು ನಾಶಮಾಡಲು ಹೊಂಚುವವರಿಗೆ ಬುದ್ಧಿ ಕಲಿಸಿ, ಯಾರಿಗೂ ಯಾರಮೇಲೂ ದ್ವೇಷವಿರಬಾರದು, ನಮ್ಮನ್ನು ಬ್ರಾಹ್ಮಣರು ದ್ವೇಷಿಸುತ್ತಿರುರೆಂಬುದು ಸುಳ್ಳು, ಅದಕ್ಕೆ ಬುಡವಿಲ್ಲ ಎಂದು ಸಾರುವುದೇ ಮುಂದಿನ ನನ್ನ ತಪಸ್ಸು! ಅದು ಸಿದ್ಧಿಸಿ, ಜನರಲ್ಲಿ ಶಾಂತಿ ನೆಲೆಸುವಂತೆ ಆಶೀರ್ವದಿಸಿ.

**ಶ್ರೀರಾಮ**—ನಿಮ್ಮ ತಪಸ್ಸು ಸಿದ್ಧಿಸಲಿ.

**ಶಂಭೂಕ**—ಹೋಗಿಬರುತ್ತೇನೆ! ದ್ವಿಜೋತ್ತಮಾ ನಮಸ್ಕಾರ!! ಆಯುಷ್ಮಂತನಾಗಿ ಬಾಳು ಮಗುವೆ. [ನಿಧಾನವಾಗಿ ನಿಷ್ಕ್ರಮಿಸುತ್ತಾ] ಕ್ಷಮೆಯೂ ಒಂದು ತಪಸ್ಸು! ಅಲ್ಲದಿದ್ದರೆ ನನ್ನಲ್ಲಿ ಈ ಪರಿವರ್ತನೆ ಯಾಗುತ್ತಿತ್ತೆ? ಇಲ್ಲ! ಇಲ್ಲ!! [ನಿಷ್ಕ್ರಮಣ.]

**ಶ್ರೀರಾಮ**—ಕ್ಷಮೆ, ಶಾಂತಿಗಳ ಆವಾಸಸ್ಥಾನವಾದ ಜಾನಕಿ ನೀನೇ ನನ್ನ ಗುರು! ಈ ಪ್ರಪಂಚದ ಗುರು!!

[ತೆರೆಯು ನಿಧಾನವಾಗಿ ಬೀಳುವುದು]

---